74

# ಮರಣ

ಶರೀರವೆಂಬ ಯಂತ್ರವು ಕೆಲಸಮಾಡದಂತೆ ನಿಂತುಹೋಗುವುದನ್ನು ಮರಣ ಎನ್ನುತ್ತಿದ್ದೇವೆ. **'ಮರ'** ಎಂದರೆ ಯಂತ್ರವೆಂದು ಅರ್ಥ. ಮರಣವೆಂದರೆ ಯಂತ್ರದಲ್ಲಿ ಲೋಪ ಏರ್ಪಟ್ಟು ನಿಂತುಹೋಗುವುದೆಂದು ಅರ್ಥ. ಯಂತ್ರದಲ್ಲಿ ಎಷ್ಟೋ ಭಾಗಗಳಿರುವಂತೆ ಶರೀರದಲ್ಲಿಯೂ ಸಹ ಎಷ್ಟೋ ಭಾಗಗಳು ಇವೆ. ಯಂತ್ರವನ್ನು ನಡೆಸುವ ಡ್ರೈವರ್ ಎನ್ನುವವನು ಪ್ರತ್ಯೇಕವಾಗಿರುವಂತೆ ಶರೀರವನ್ನು ನಡೆಸುವವನು ಸಹ ಪ್ರತ್ಯೇಕವಾಗಿದ್ದಾನೆ. ಯಂತ್ರವನ್ನು ನಡೆಸುವವನನ್ನು ಡ್ರೈವರ್ ಎನ್ನುವಂತೆ ಶರೀರಯಂತ್ರವನ್ನು ನಡೆಸುವವನನ್ನು ಆತ್ಮ ಎನ್ನುತ್ತಿದ್ದಾರೆ. ಶರೀರವನ್ನು ನಡೆಸುವ ಆತ್ಮ ಶರೀರದಲ್ಲಿಯೇ ಇದ್ದು ಶರೀರವನ್ನು ನಡೆಸುವುದನ್ನು ಜೀವನ ಎನ್ನುತ್ತೇವೆ. ಶರೀರ ಯಂತ್ರದಲ್ಲಿ ಲೋಪ ಏರ್ಪಟ್ಟಾಗ ಅದು ಕೆಲಸಮಾಡದ ಸ್ಥಿತಿಗೆ ಸೇರಿಕೊಂಡಾಗ ಆತ್ಮ ಶರೀರವನ್ನು ನಡೆಸುವುದನ್ನು ಮುಗಿಸಿ ಮತ್ತೊಂದು ಹೊಸ ಶರೀರವನ್ನು ನೋಡಿಕೊಳ್ಳುತ್ತದೆ. ಆತ್ಮ ಶರೀರವನ್ನು ಬಿಟ್ಟುಹೋಗುವು ದನ್ನು ಶರೀರಯಂತ್ರವು ಕೆಲಸ ಮಾಡದಿರುವಾಗಲೇ ನಡೆಯುತ್ತದೆ. ಶರೀರ ಯಂತ್ರ ನಿಂತುಹೋಗುವುದನ್ನು ಮರಣವೆಂದು ಒಂದು ಗುರುತಿಗಾಗಿ ಹೆಸರಿಟ್ಟಿದ್ದಾರೆ. ಯಂತ್ರದ ಜ್ಞಾಪಕ ಬಂದಾಗ ಅದನ್ನು ನಡೆಸುವವನು ಮತ್ತೊಬ್ಬನಿರು ತ್ತಾನೆಂದು ತಿಳಿಯುವಂತೆ ಮರಣ ಎನ್ನುವ ಹೆಸರನ್ನು ದೊಡ್ಡವರು ನಿರ್ಣಯಿಸಿದ್ದಾರೆ. ಮರಣದಲ್ಲಿ ಶರೀರ ಯಂತ್ರವನ್ನು ನಡೆಸುವವನು ಇಲ್ಲದಂತೆಹೋಗಿದ್ದಾನೆಂಬುವ ಅರ್ಥದಿಂದ ಪೂರ್ವದಲ್ಲಿ ಆ ಹೆಸರನ್ನು ಇಟ್ಟಿದ್ದಾರೆ. ಈ ವಿಷಯವು ಈ ವಿಧವಾಗಿ ಆಧ್ಯಾತ್ಮಿಕ ಅರ್ಥದಿಂದಿರುವಾಗ ಪುರಾಣಗಳಲ್ಲಿ ಮತ್ತೊಂದು ವಿಧವಾಗಿ ಹೇಳುವುದು ನಡೆದಿದೆ. ಯಮಲೋಕ ಒಂದಿದೆ ಎಂದು, ಅಲ್ಲಿ ಯಮಧರ್ಮರಾಜು ಇದ್ದಾನೆಂದು, ಮನುಷ್ಯನ ಆಯುಷ್ ಮುಗಿದುಹೋದ ತಕ್ಷಣ ಯಮಧರ್ಮರಾಜು ತನ್ನ ಭಟರನ್ನು ಕಳುಹಿಸಿ ಮನುಷ್ಯ ಪ್ರಾಣ ತೆಗೆಯುತ್ತಿದ್ದಾನೆಂದು, ಹಾಗೆ ಒಂದು ಶರೀರದಿಂದ ಜೀವಿಯನ್ನು ಬೇರೆ ಮಾಡಿ ತನ್ನಲೋಕಕ್ಕೆ ತೆಗೆದುಕೊಂಡುಹೋಗುತ್ತಿದ್ದಾನೆಂದು ಹೇಳಿದ್ದಾರೆ. ಈ ವಿಷಯಗಳು ಶಾಸ್ತ್ರಬದ್ಧ ಅಲ್ಲವೆಂದು, ಇದರಲ್ಲಿ ವಾಸ್ತವ ಇಲ್ಲವೆಂದು

ನಾವು ಬಹಳಸಲ ಹೇಳಿದ್ದೇವೆ. ಮಾನವನಿಗೆ ಭಯವನ್ನು ಉಂಟುಮಾಡುವುದಕ್ಕೆ ಯಮಲೋಕ ಅಲ್ಲಿನ ಶಿಕ್ಷೆಗಳನ್ನು ಸೃಷ್ಟಿಸಿದ್ದಾರೆ. ಆದರೆ ಪಾಪಗಳಿಗೆ ಶಿಕ್ಷೆ ಭೂಮಿ ಮೇಲೆಯೇ ಬೀಳುತ್ತಿದೆ ಎಂದು ಹೇಳಲಾರದೆ ಹೋಗಿದ್ದಾರೆ.

ಮರಣ ಸಮಯದಲ್ಲಿ ಜೀವಾತ್ಮ ಬಹಳ ದುಃಖಪಡುತ್ತಾನೆಂದು, ಮರಣಬಾಧೆ ಸಾವಿರ ಚೇಳುಗಳು ಕಚ್ಚಿದಂತೆ ಇರುತ್ತದೆಂದು, ಜೀವನದಲ್ಲಿ ಎಲ್ಲಾ ದುಃಖಗಳಿಗಿಂತ ಮರಣಬಾಧೆ ದೊಡ್ಡದೆಂದು ಪುರಾಣಗಳಲ್ಲಿ ಹೇಳಿರುವುದರಿಂದ ಬಹಳ ಜನರು ಮರಣ ಎಂದರೆ ಹೆಚ್ಚಾಗಿ ಭಯಪಡುತ್ತಾರೆ. ಕೆಲವರು ಹೇಳಿದಂತೆ ಮರಣ ಸಮಯದಲ್ಲಿ ಯಮಕಿಂಕರರು ಬರುತ್ತಾರೆಂದು, ಅವರು ಭಯಂಕರವಾಗಿ ಇರುತ್ತಾರೆಂದು ಮರಣ ಬರದ ಮುಂಚೆಯೇ ಭಯಪಡುತ್ತಿರುತ್ತಾರೆ. ಕೆಲವರು ಯಮಲೋಕದಲ್ಲಿನ ಬಾಧೆಗಳು ಹೀಗಿರುತ್ತವಂತೆ ಎಂದು ಮುಂಚೆಯೇ ಜ್ಞಾಪಕಮಾಡಿಕೊಂಡು ಬಾಧೆಪಡುವವರು ಇದ್ದಾರೆ. ಇಷ್ಟು ಅಪೋಹಗಳಿಂದ ಕೂಡಿಕೊಂಡ ಮರಣವನ್ನು ಕುರಿತು ಶಾಸ್ತ್ರಪದ್ಧತಿಯನ್ನು ತಿಳಿದುಕೊಳ್ಳುವುದು ಒಳ್ಳೆಯದು. ಹೇತುಬದ್ಧವಾಗಿ ಮರಣದ ಬಗ್ಗೆ ಬರೆಯಬೇಕೆಂದರೆ ಆ ಸಮಯದಲ್ಲಿ ಶರೀರದಲ್ಲಿ ಏನು ನಡೆಯುತ್ತಿದೆಯೋ ಪರಿಶೀಲಿಸಿ ನೋಡಬೇಕು. ಮರಣವನ್ನು ಕುರಿತು ಬರೆಯಬೇಕೆಂದರೆ ಒಂದುಸಲ ಮರಣಿಸಿ ಆಗ ಏನು ನಡೆಯುತ್ತಿದೆಯೋ ನೋಡಿದವನೆ ಬರೆಯುತ್ತಾನೆ. ಹಾಗೆ ಬರೆಯುವುದಕ್ಕೆ ಸತ್ತುಹೋದವನು ಮತ್ತೆ ಹುಟ್ಟಿದಲ್ಲಿಯೂ ಅವನಿಗೆ ಮರಣದ ವಿಷಯ ಜ್ಞಾಪಕ ಇರುವುದಿಲ್ಲ. ಜೀವಿಗೆ ತಾನು ಶರೀರ ಧರಿಸಿ ಹೇಗೆ ಹುಟ್ಟಿದ್ದೇನೆಂಬ ವಿಷಯವೂ ಸಹ ಜ್ಞಾಪಕ ಇರುವುದಿಲ್ಲ. ಮರಣದ ನಂತರ ಬಂದಿರುವ ಜನನದ ವಿಷಯವೇ ತಿಳಿಯದಿರುವ ಜೀವಿಯು ಹುಟ್ಟುವುದಕ್ಕಿಂತ ಮೊದಲು ನಡೆದ ಮರಣದ ವಿಷಯವನ್ನು ಹೇಗೆ ಹೇಳುತ್ತಾನೆ? ಜನನ ಮರಣಗಳನ್ನು ಕುರಿತು ಜೀವಿಯು ಹೇಳುವುದಕ್ಕೆ ಅವಕಾಶವೆ ಇಲ್ಲ. ಆದ್ದರಿಂದ ಜನನ ಮರಣಗಳು ಎರಡು ರಹಸ್ಯಗಳೆಂದು ಹೇಳಬಹುದು. ಅಂತಹದರಲ್ಲಿ ಅವು ರಹಸ್ಯಗಳಾಗಿಯೇ ಇದ್ದರೆ ಮನುಷ್ಯ ತನ್ನ ಇಷ್ಟಬಂದಂತೆ ಊಹಿಸಿಕೊಳ್ಳುವುದಕ್ಕೆ ಅವಕಾಶ ಇದೆ.

ಭೂಮಿ ಮೇಲೆ ಇಲ್ಲದ ಹೊಸ ವಿಷಯಗಳು, ಮನುಷ್ಯನಿಗೆ ತಿಳಿಯದ ಹೊಸ ವಿಷಯಗಳು, ಮನುಷ್ಯ ಊಹಿಸುವುದಕ್ಕೂ ಸಹ ಕೈಲಾಗದ ವಿಷಯಗಳು ಎಷ್ಟೋ ಮನುಷ್ಯನ ಮೂಲಕ ಹೊರಗೆ ಬಂದಿವೆ. ಉದಾಹರಣೆಗೆ ದೂರದರ್ಶನ (T.V) ಗಳು, ದೂರಶ್ರವಣ (ರೆಡಿಯೋ) ಗಳು, ಕಂಪ್ಯೂಟರ್‌ಗಳು, ರೈಲುಗಳು, ವಿಮಾನಗಳು ಮೊದಲಾದವುಗಳೆಲ್ಲವೂ ಮೊದಲು ಮನುಷ್ಯನಿಗೆ ತಿಳಿಯದ ವಿಷಯಗಳೇ. ಎಷ್ಟೋ ಅದ್ಭುತವಾದ ವಿಷಯಗಳು ಮನುಷ್ಯನ ಮೂಲಕ ಹೊರಗೆ ಬರುತ್ತಲೇ ಇವೆ. ಇವೆಲ್ಲವೂ ಶಾಸ್ತ್ರಬದ್ಧ ಹೇತುಬದ್ಧ ವಿಷಯಗಳೇ. ಅಂತಹದರಲ್ಲಿ ರಹಸ್ಯಗಳಾಗಿ ತಿಳಿಯದಿರುವ ಜನನ ಮರಣಗಳು ಶಾಸ್ತ್ರಬದ್ಧವಾಗಿ ತಿಳಿಯಲಾರೆವಾ! ಖಂಡಿತ ತಿಳಿಯಬಹುದು. ಮನುಷ್ಯ ಕಂಡುಹಿಡಿದ ಹೊಸ ಸೂತ್ರಗಳೆಲ್ಲವೂ ಮನುಷ್ಯ ಹೇಗೆ ಕಂಡುಹಿಡಿದಿದ್ದಾನೋ ವಿಶದಪಡಿಸಿಕೊಂಡು ನೋಡಿದಂತಾದರೆ ಅದರ ಪ್ರಕಾರವೇ ಉಳಿದ ವಿಷಯಗಳು ಸಹ ಕಂಡುಹಿಡಿಯ ಬಹುದೆಂದು ತಿಳಿಯುತ್ತಿದೆ. ಮನುಷ್ಯನ ಶರೀರದಲ್ಲಿ ಜೀವಿಯೂ ಇದ್ದಾನೆ, ಆತ್ಮವೂ ಇದೆ ಮತ್ತು ಪರಮಾತ್ಮವೂ ಇದೆ. ಒಂದೇ ಶರೀರದಲ್ಲಿ ಮೂವರಿದ್ದಾರೆ ಎನ್ನುವ ವಿಷಯ ಸ್ವಲ್ಪ ಹೊಸದಾಗಿದ್ದರು ಸಹ ಅದು ಎಲ್ಲರಿಗೂ ತಿಳಿಯದ ವಾಸ್ತವವೇ ಎಂದು ಹೇಳಬಹುದು. ಶರೀರದಲ್ಲಿ ಮೂವರಿದ್ದಾರೆಂಬ ವಿಷಯವು ಶಾಸ್ತ್ರಬದ್ದವಾದುದು. ಬ್ರಹ್ಮವಿದ್ಯಾಶಾಸ್ತ್ರವಾದ ಭಗವದ್ಗೀತೆಯಲ್ಲಿ ಸ್ವತಃ ಭಗವಂತನೇ ಈವಿಷಯವನ್ನು ತಿಳಿಸಿದ್ದಾನೆ.

ಮನುಷ್ಯ ಎಷ್ಟೋ ಹೊಸ ವಿಷಯಗಳನ್ನು ಕಂಡುಹಿಡಿದಾಗ ಅದಕ್ಕೆ ಒಂದು ಸಿದ್ಧಾಂತವೆಂದು ಹೆಸರು ಇಡುವುದು, ಆ ಸಿದ್ಧಾಂತವನ್ನು ತಾನೇ ಕಂಡುಹಿಡಿದಂತೆ ಸಿದ್ಧಾಂತದ ಮುಂದೆ ತನ್ನ ಹೆಸರನ್ನೇ ಇಟ್ಟುಕೊಳ್ಳುವುದು ನಡೆಯುತ್ತಿದೆ. ಉದಾಹರಣೆಗೆ ನ್ಯೂಟನ್ ಸಿದ್ಧಾಂತ, ಡಾರ್ವಿನ್ ಸಿದ್ಧಾಂತ ಅಂತಹವೆ. ಒಬ್ಬ ಮನುಷ್ಯ ಒಂದು ಹೊಸ ವಿಷಯವನ್ನು ಕಂಡುಹಿಡಿದಂತೆ ನಾವು ಸಹ ಒಪ್ಪಿಕೊಳ್ಳುತ್ತಿದ್ದೇವೆ. ಆದಲ್ಲಿಯೂ ಆಲೋಚಿಸಿದರೆ ಪ್ರಶ್ನೆ ಬರುತ್ತದೆ. ಅದೇನೆಂದರೆ ಶರೀರದಲ್ಲಿರುವುದು ಮೂವರು ತಾನೆ! ಅಂತಹದರಲ್ಲಿ ಒಂದು

ಹೊಸ ವಿಷಯವನ್ನು ಮನುಷ್ಯನಿಂದ ಹೊರಗೆ ಬಂದರೆ ಆ ವಿಷಯವನ್ನು ಇರುವ ಮೂವರಲ್ಲಿ ಯಾರು ಹೇಳಿದ್ದಾರೆ? ಇದನ್ನು ಪ್ರಶ್ನೆ ಅಲ್ಲವೆಂದು ನಾವು ಅನ್ನುವುದಿಲ್ಲ. ಒಂದು ಮನೆಯಲ್ಲಿ ಮೂವರು ನಿವಾಸ ಮಾಡುತ್ತಿರುವಾಗ, ಆ ಮನೆಯಿಂದ ಒಂದು ದೊಡ್ಡ ಸಹಾಯ ಹೊರಗಿನವರಿಗೆ ಸಿಕ್ಕಾಗ, ಆ ಮನೆಯಲ್ಲಿ ಯಾರ ಮೂಲಕ ಆ ಸಹಾಯ ಸಿಕ್ಕಿದೆಯೋ ತಿಳಿದುಕೊಳ್ಳುವುದು ಹೊರಗಿನವರ ಕೆಲಸ. ಈ ಸಹಾಯ ಮಾಡಿದವರು ಯಾರು ಎಂದು ಪ್ರಶ್ನೆ ಬಂದಾಗಲೇ ಒಂದೇ ಮನೆಯಲ್ಲಿರುವ ಮೂವರ ಮೇಲೆ ನಮ್ಮ ದೃಷ್ಟಿಹೋಗುತ್ತದೆ. ಕೊನೆಗೆ ಯಾರು ಮಾಡಿರುವುದು ತಿಳಿಯುತ್ತದೆ. ಮನೆಯಲ್ಲಿರುವ ಮೂವರಲ್ಲಿ ಯಾರಿಗೆ ಎಷ್ಟು ಸಾಮರ್ಥ್ಯ ಇರುವುದು, ಯಾರಿಗೆ ಸಹಾಯ ಮಾಡುವ ಶಕ್ತಿ ಇದೆಯೋ ತಿಳಿದುಕೊಂಡರೆ ಮೂವರಲ್ಲಿ ಸಹಾಯ ಮಾಡಿದವನನ್ನು ಸುಲಭವಾಗಿ ಗುರುತಿಸಬಹುದು.

ಶರೀರ ಗೃಹದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂವರು ವಾಸಿಸುತ್ತಿದ್ದಾರೆ. ಶರೀರ ಗೃಹದಿಂದ ಒಂದು ರಹಸ್ಯ ಹೊರಬಿದ್ದಾಗ ಶರೀರದಲ್ಲಿನ ಮೂವರನ್ನು ವಿಶದವಾಗಿ ಪರಿಶೀಲಿಸಬೇಕಾದ ಅಗತ್ಯವಿದೆ. ಮೂವರಿರುವ ವಿಷಯ ತಿಳಿಯದೆಹೋದರೆ ಅಸಲು ಯಾರು ಹೇಳಿರುವುದು ತಿಳಿಯದೆ ಹೋಗುವುದು. ಆದ್ದರಿಂದ ಮೂವರಿರುವ ವಿಷಯ ಮೊದಲೇ ತಿಳಿದುಕೊಂಡು ಆ ಮೂವರ ಸಮಾಚಾರ ವಿವರವಾಗಿ ತಿಳಿದುಕೊಳ್ಳಬೇಕು. ಶರೀರದಲ್ಲಿರುವ ಮೂವರಲ್ಲಿ ನಾನು ಎನ್ನುವ ಭಾವದಿಂದಿರುವವನೆ ಜೀವಾತ್ಮ. ಶರೀರದಲ್ಲಿ ಯಾವ ಕೆಲಸ ನಡೆಯುತ್ತಿದ್ದರು ಎಲ್ಲಾ ನಾನೇ ಮಾಡಿದ್ದೇನೆಂದು ಅಂದು ಕೊಳ್ಳುವವನೆ ಜೀವಾತ್ಮ. ವಾಸ್ತವಕ್ಕೆ ಈ ಜೀವಿಯಾರು? ಶರೀರದಲ್ಲಿ ಇವನ ಕರ್ತವ್ಯವೇನು? ಶರೀರದಲ್ಲಿ ಏಕೆ ಇದ್ದಾನೆ? ಇಂತಹ ಮೊದಲಾದ ಪ್ರಶ್ನೆಗಳಿಗೆ ಉತ್ತರ ಬೇಕೆಂದರೆ ಜೀವಿಯನ್ನು ಕುರಿತು ವಿವರವಾಗಿ ತಿಳಿದು ಕೊಳ್ಳೋಣ.

ಪ್ರಪಂಚದಲ್ಲಿ ಎಷ್ಟೋ ಸ್ಥಿತಿಗತಿಗಳಲ್ಲಿರುವ ಮನುಷ್ಯರಲ್ಲಿ ಜೀವಾತ್ಮ ಇದ್ದು ತಾನು ಮೇಲಿರುವಂತಹ ಸ್ಥಿತಿಯಿಂದ, ಗೌರವದಿಂದ ನಾನು ಮಂತ್ರಿ

ಎಂದೋ, ನಾನು ಆಫೀಸರ್‌ನೆಂದೋ, ಧನಿಕನೆಂದೋ, ಬಡವನೆಂದೋ ತಿಳಿಯುತ್ತಿದ್ದಾರೆ. ನಿಜಕ್ಕೆ ಜೀವಿಗೂ ಹೊರಗಿನ ಸ್ಥಿತಿಗೂ ಏನು ಸಂಬಂಧವಿಲ್ಲ. ಶರೀರದಲ್ಲಿ ಜೀವಿಯು ಶರೀರವೆಲ್ಲವೂ ಇಲ್ಲದಂತೆ ಕೇವಲ ಒಂದುಕಡೆ ಮಾತ್ರ ಇದ್ದಾನೆ. ಶರೀರದಲ್ಲಿ ಜೀವಾತ್ಮದ ಪರಿಮಾಣ ಮನುಷ್ಯ ಶರೀರದಲ್ಲಿನ 31, 104ನೇ ಭಾಗವೆಂದು ಒಂದು ಲೆಕ್ಕವಿದೆ. (ಈ ಲೆಕ್ಕ ತಿಳಿಯಬೇಕೆಂದರೆ ನಮ್ಮ ರಚನೆಯಲ್ಲಿನ **"ನಿಗೂಢ ತತ್ವಾರ್ಥಬೋಧಿನಿ"** ಎನ್ನುವ ಗ್ರಂಥದಲ್ಲಿ 93ನೇ ಪದ್ಯದ ಭಾವವನ್ನು ನೋಡಬೇಕು) ಮನುಷ್ಯ ಶರೀರದಲ್ಲಿ ಕೆಲವು ಸಾವಿರದಷ್ಟು ಚಿಕ್ಕವನಾದ ಜೀವಾತ್ಮನನ್ನು. ಕೆಲವು ಸಂದರ್ಭಗಳಲ್ಲಿ ನೀನು ರವೆಯಷ್ಟೂ ಇಲ್ಲ ಎನ್ನುವುದು ಸಹ ನಡೆಯುತ್ತಿದೆ. ಎಷ್ಟೋ ಸಣ್ಣ ಆಕಾರ ಹೊಂದಿದ ಜೀವಿಯು ಶರೀರದಲ್ಲಿ ನಡೆಯುವ ಕೆಲಸಗಳ ಅನುಭವಗಳು ಅನುಭವಿಸುವುದಕ್ಕೆ ಮಾತ್ರವೆ, ಸುಖದುಃಖಗಳನ್ನು ಅನುಭವಿಸುವುದಕ್ಕೆ ಮಾತ್ರವೇ ಜೀವಿಯು ಶರೀರದಲ್ಲಿ ಇದ್ದಾನೆ. ಜೀವಿಗೂ ಹೊರಗಿನ ಪದವಿಗೂ ಸಂಬಂಧವಿಲ್ಲ. ಶರೀರದಲ್ಲಿ ಯಾವ ಕೆಲಸ ಮಾಡದ, ಯಾವ ಪದವಿಗೆ ಸಂಬಂಧವಿಲ್ಲದ ಜೀವಿಯು ಮಾತ್ರ ಹೊರಗಿನ ಪದವಿ ತನ್ನದೇ ಎಂದು ಎಲ್ಲಾ ಕೆಲಸಗಳು ಮಾಡುತ್ತಿರುವುದು ತಾನೇಯೆಂದು ತಿಳಿಯುತ್ತಿರುತ್ತಾನೆ. ಶರೀರದಲ್ಲಿನ ಜೀವಾತ್ಮ ಹೇಗೆ ತಿಳಿದರೂ ನಡೆಯುತ್ತಿರುವ ಕೆಲಸಗಳಿಗಾಗಲಿ, ಹೊರಗಿನ ಪದವಿಗಾಗಲಿ, ಮಾಡುತ್ತಿರುವ ಆಲೋಚನೆಗಳಿಗಾಗಲಿ, ಕಂಡುಹಿಡಿದ ರಹಸ್ಯಗಳಿಗಾಗಲಿ ಸ್ವಲ್ಪವೂ ಸಂಬಂಧ ಇಲ್ಲದವನಾಗಿದ್ದಾನೆ, ನನ್ನಸ್ಥಿತಿ ಇದು ಎಂದು, ನಾನು ಏನು ಮಾಡಲಿಲ್ಲವೆಂದು, ಯಾವ ಕೆಲಸವಾಗಲಿ, ಹೇಳುವ ವಿಷಯವಾಗಲಿ ನನಗೆ ಸಂಬಂಧವಿಲ್ಲವೆಂದು ಜೀವಾತ್ಮ ಅಂದುಕೊಳ್ಳುವುದಿಲ್ಲ. ಜೀವಿಗಿರುವ ಅಜ್ಞಾನದಿಂದ ತನ್ನ ಸ್ಥಿತಿಯನ್ನಾಗಲಿ, ತನ್ನ ಪರಿಣಾಮವನ್ನಾಗಲಿ ಶರೀರದಲ್ಲಿನ ತನ್ನ ನಿವಾಸಸ್ಥಳವನ್ನಾಗಲಿ ತಿಳಿಯಲಾರದೆ ಹೋಗಿದ್ದಾನೆ. ಕರ್ಮಗಳನ್ನು ಅನುಭವಿಸುವುದಕ್ಕೆ ಮಾತ್ರ ಶರೀರದಲ್ಲಿ ಇದ್ದೇನೆಂದು, ಉಳಿದಿರುವುದೇನು ತನಗೆ ಸಂಬಂಧ ಇಲ್ಲವೇ ಇಲ್ಲವೆಂದು ತಿಳಿಯದೆ ಹೋಗುವುದರಿಂದ ನಡೆದ ಕೆಲಸವನ್ನು ನಾನೇ ಮಾಡಿದ್ದೇನೆಂದುಕೊಳ್ಳುತ್ತಿದ್ದಾನೆ. ಹಾಗೆಯೆ ಕಂಡುಹಿಡಿದು

ಹೊರಗೆ ತಿಳಿಸಿದ ರಹಸ್ಯವನ್ನು ತಾನೇ ಹೇಳಿದ್ದೇನೆಂದು ಆ ಸಿದ್ಧಾಂತ ತನ್ನದೆ ಎಂದು ತಿಳಿಯುತ್ತಿದ್ದಾನೆ. ವಾಸ್ತವ ಜ್ಞಾನದ ಪ್ರಕಾರ ಜೀವಾತ್ಮ ಶರೀರದಲ್ಲಿ ಅಸ್ವತಂತ್ರನು, ಅನಾಮಕನು ಕರ್ಮಬದ್ಧನಾಗಿ ಕರ್ಮವನ್ನು ಅನುಭವಿಸುವವ ನಾಗಿದ್ದಾನೆ.

ಒಂದನೆಯದು ಆತ್ಮವಾದ ಜೀವಾತ್ಮಕ್ಕೂ ಶರೀರದಲ್ಲಿ ನಡೆಯುವ ಕೆಲಸಗಳಿಗೂ ಏನು ಸಂಬಂಧವಿಲ್ಲವೆಂದು, ತನ್ನವರೆಗೂ ಬಂದಿರುವುದನ್ನು ಅನುಭವಿಸುವುದು ಹೊರತು ಮತ್ತೆ ಯಾವ ಕಾರ್ಯವು ಇಲ್ಲವೆಂದು ತಿಳಿದು ಕೊಂಡಿದ್ದೇವೆ. ಮೊದಲನೆಯದಾದ ಜೀವಾತ್ಮ ಹಾಗೆ ಇರುವಾಗ ಕೊನೆಯದಾದ ಪರಮಾತ್ಮ ಸುಮಾರು ಜೀವಾತ್ಮನಂತೆ ಏನು ಮಾಡದೆ. ಜೀವಾತ್ಮ ಪ್ರಾರಬ್ಧಕರ್ಮ ವನ್ನು ಅನುಭವಿಸುತ್ತಾ ಅಹಮ್‌ನಿಂದ ಆಗಾಮಿಕ ಕರ್ಮವನ್ನು ಸಂಪಾದಿ ಸಿಕೊಳ್ಳುತ್ತಿದೆ. ಪರಮಾತ್ಮ ಹಾಗೆ ಕರ್ಮವನ್ನು ಅನುಭವಿಸುವುದೂ ಇಲ್ಲ, ಸಂಪಾದಿಸಿಕೊಳ್ಳಲೂ ಇಲ್ಲ. ಜೀವಾತ್ಮ ಶರೀರದಲ್ಲಿ ಒಂದು ಕಡೆ ಮಾತ್ರ ಇದ್ದಾನೆ, ಪರಮಾತ್ಮ ಶರೀರವೆಲ್ಲ ವ್ಯಾಪಿಸಿದ್ದು ಶರೀರದ ಹೊರಗೂ ಸಹ ವ್ಯಾಪಿಸಿದ್ದಾನೆ. ಜೀವಾತ್ಮನಿಗೆ ಆಕಾರ ಪರಿಮಾಣಗಳಿರುವಾಗ, ಪರಮಾತ್ಮನಿಗೆ ಆಕಾರವಿಲ್ಲ. ಪರಿಮಾಣವಿಲ್ಲ. ಶರೀರದಲ್ಲಿ ಪರಮಾತ್ಮ ಯಾವಕಾರ್ಯ ಮಾಡದೆ ಸುಮ್ಮನೆ ಇದ್ದಾನೆಂದು ಹೇಳಬಹುದು. ಜೀವಾತ್ಮನಂತೆ ನಡೆದ ಕೆಲಸಗಳಿಗೆ ಕರ್ತನು ನಾನೇ ಎಂದು ಅಂದುಕೊಳ್ಳುವವನಲ್ಲ. ಜೀವಾತ್ಮ ಮಾಡದೆ ಮತ್ತು ಪರಮಾತ್ಮ ಸಹ ಮಾಡದೆಹೋದರೆ ಮನುಷ್ಯ ಹೇಗೆ ಮಾಡುತ್ತಿದ್ದಾನೆಂದು ಬಹಳಜನರಿಗೆ ಪ್ರಶ್ನೆಬರಬಹುದು. ಅದಕ್ಕೆ ಉತ್ತರ ಏನೆಂದರೆ! ಇಲ್ಲಿಯವರೆಗೂ ಆಧ್ಯಾತ್ಮಿಕ ವಿದ್ಯೆಯಲ್ಲಿ ಪ್ರಚಾರವಾಗದ ಆತ್ಮವೂ ಸಹ ಶರೀರದಲ್ಲಿ ಒಂದಿದೆ. ಅದುವೇ ಮೊದಲ ಜೀವಾತ್ಮನಿಗೂ, ಮೂರನೆ ಪರಮಾತ್ಮನಿಗೂ ಮಧ್ಯದಲ್ಲಿರುವ ಎರಡನೇ ಆತ್ಮ. ಬಹಳ ಜನರಿಗೆ ಜೀವನೊಬ್ಬನಿದ್ದಾನೆಂದು, ಪರಮಾತ್ಮನಾದ ದೇವರೊಬ್ಬನಿದ್ದಾನೆಂದು ತಿಳಿದಿದೆ ಆದರೆ ಎರಡಕ್ಕೂ ಮಧ್ಯದಲ್ಲಿರುವ ಆತ್ಮ ಒಂದು ಇದೆ ಎಂದು ತಿಳಿದಿಲ್ಲ. ಕೆಲವು ಜನರ ವಿವಾದದ ಪ್ರಕಾರ ಪರಮಾತ್ಮ

ಒಬ್ಬನೇ ಇದ್ದಾನೆಂಬುವುದೂ ಸಹ ಇದೆ. ಯಾರೇನು ಹೇಳಿದರೂ ಶರೀರದಲ್ಲಿ ಏನೂ ಮಾಡದ ಜೀವಾತ್ಮ, ಪರಮಾತ್ಮ ಇಬ್ಬರಿರುವಾಗ ಎಲ್ಲಾ ಮಾಡುತ್ತಿರುವ ಆತ್ಮವೂ ಸಹ ಇದೆ. ಶರೀರದಲ್ಲಿ ಎಲ್ಲಾ ಮಾಡುತ್ತಿದ್ದರು ಆತ್ಮವನ್ನು ಗುರುತಿಸದೆ ಹೋಗುವುದು ನಮಗಿರುವ ದೊಡ್ಡ ಅಜ್ಞಾನ. ಎಲ್ಲಿಯಾದರೂ ಆತ್ಮವೆಂಬ ಹೆಸರು ಕೇಳಿಸಿದರು ಆತ್ಮವೇ ನೀನು, ನೀನೇ ಆತ್ಮನೆಂದು ಬೋಧಿಸುವುದೂ ನಡೆಯುತ್ತಿದೆ. ಜೀವಾತ್ಮ ಬೇರೆ, ಆತ್ಮ ಬೇರೆ, ಪರಮಾತ್ಮ ಬೇರೆ ಎಂದು ತಿಳಿಯುವ ಜ್ಞಾನ ನಮ್ಮ ಹತ್ತಿರವಿಲ್ಲದೆ ಹೋಗುವುದು ದೊಡ್ಡ ಲೋಪವೆಂದು ಹೇಳಬಹುದು.

ಎರಡನೇ ಆತ್ಮ ಇತ್ತ ಜೀವಾತ್ಮನಿಗೂ ಅತ್ತ ಪರಮಾತ್ಮನಿಗೂ ಮಧ್ಯದಲ್ಲಿದ್ದು ಪರಮಾತ್ಮನಿಗೆ ಪ್ರತಿನಿಧಿಯಾಗಿ, ಜೀವಾತ್ಮನಿಗೆ ಅಧಿಪತಿಯಾಗಿದೆ. ಶರೀರದಲ್ಲಿನ ಆತ್ಮ ಶರೀರವೆಲ್ಲ ವ್ಯಾಪಿಸಿದ್ದು ಎಲ್ಲಾ ಕೆಲಸಗಳನ್ನು ತಾನೇ ಮಾಡುತ್ತಿದೆ. ಶರೀರದ ಮೂಲಕ ಹೊರಗೆ ನಡೆಯುವ ಕಾರ್ಯಗಳನ್ನಾಗಲಿ ಯಾವಾಗಲೂ ಶರೀರದೊಳಗೆ ನಡೆಯುವ ಕಾರ್ಯಗಳಿಗಾಗಲಿ ಅಧಿಪತಿ ಆತ್ಮವೆ. ಶರೀರದೊಳಗೆ ಅವಯವಗಳನ್ನು ಕದಲಿಸಿ ಆಡಿಸುತ್ತಾ, ಹೊರಗಿನ ಅವಯವಗಳಾದ ಕಾಲು ಕೈಗಳನ್ನು ಕದಲಿಸಿ ಎಷ್ಟೋ ಕಾರ್ಯಗಳು ಮಾಡುತ್ತಿರುವ ಆತ್ಮ ಈ ಕೆಲಸಗಳಿಗೆಲ್ಲಾ ನಾನೇ ಕಾರಣವೆಂದು ಎಲ್ಲಿಯೂ ಹೇಳಿಕೊಳ್ಳದಿರುವುದರಿಂದ ಯಾರು ಆತ್ಮವನ್ನು ಗುರುತಿಸುವುದಕ್ಕೆ ಸಾಧ್ಯವಿಲ್ಲದೆ ಹೋಗಿದೆ. ಏನು ಮಾಡಲಾರದ ಜೀವಾತ್ಮ ಎಲ್ಲಾ ಮಾಡುತ್ತಿದ್ದೇನೆಂದು ಕೊಳ್ಳುವುದರಿಂದ ಆತ್ಮದ ಪಾತ್ರ ಯಾರಿಗೂ ತಿಳಿಯದಂತೆಹೋಗಿದೆ. ನಮಗೆ ತಿಳಿಯದಿದ್ದರೂ ತಿಳಿದ ಆತ್ಮ ಎನ್ನುವುದು ಒಂದಿದೆ ಅದು ಶರೀರದೊಳಗೆ, ಶರೀರದಹೊರಗೆ ಕೆಲಸಗಳು ಮಾಡುವುದಲ್ಲದೆ ಶರೀರದೊಳಗಿನ ಪ್ರತಿ ಅವಯವಕ್ಕೂ ಶಕ್ತಿಯನ್ನು ಕೊಡುತ್ತಿದೆ. ತಾನೆ ಚೈತನ್ಯವಾಗಿ ಶರೀರವೆಲ್ಲವೂ ವ್ಯಾಪಿಸಿರುವುದಲ್ಲದೇ ಎಲ್ಲದಕ್ಕೂ ಕಾರಣ ಅದೇ ಆಗಿದೆ. ಜೀವಾತ್ಮ ಪರಮಾತ್ಮ ಎರಡು ಏನು ಮಾಡದೆ ಹೋದರೂ ಜಗತ್ತಿನ ಅಭಿವೃದ್ಧಿಗೆ ಸಾಮಾಜಿಕ

ಪುರೋಗತಿಗೆ ಬೇಕಾದ ಯಂತ್ರಗಳನ್ನು, ತಿಳಿಯದ ಸಿದ್ಧಾಂತಗಳನ್ನು, ವಿಜ್ಞಾನ ಶಾಸ್ತ್ರಪರಿಶೋಧನೆಯನ್ನು ಆತ್ಮವೇ ಸ್ಮೃತಿ ಮೂಲಕ ತಿಳಿಸುತ್ತಿದೆ. ತಿಳಿಯದ ವಿಷಯಗಳನ್ನು ತಾನೇ ತಿಳಿಸುತ್ತಿದೆ. ಈ ದಿನ ಭೂಮಿ ಮೇಲೆ ಕಂಪ್ಯೂಟರ್‌ಗಳು ಮೊದಲುಗೊಂಡು ಎಷ್ಟೋ ವಿಜ್ಞಾನ ಪರಿಕರಗಳು ಎಲ್ಲವೂ ಆತ್ಮದ ಸ್ಮೃತಿ ಮೂಲಕ ತಿಳಿದಿರುವವೇ ಎಂದು ತಿಳಿಯಬೇಕು. ಈ ವಿಷಯ ಶಾಸ್ತ್ರಬದ್ಧವಾದು ದೆಂದು ತಿಳಿಸುವುದಕ್ಕೆ ಆಧಾರವೂ ಸಹ ಇದೆ. ಭಗವದ್ಗೀತೆ ಶಾಸ್ತ್ರದಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ ಹದಿನೇಳನೆಯ ಶ್ಲೋಕದಲ್ಲಿ **"ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿರ್ಜ್ಞಾನ ಮಪೋಹನಂಚ",** ಎಂದು ಆತ್ಮ ವಿಧಾನ ಹೇಳಲಾಗಿದೆ. ಸ್ಮೃತಿ, ಜ್ಞಾನ, ಊಹೆ ಎಲ್ಲಾ ಆತ್ಮದಿಂದಲೇ ಉಂಟಾಗುತ್ತಿದ್ದರೂ, ಎಲ್ಲಾ ಕೆಲಸಗಳು ಆತ್ಮದಿಂದಲೇ ನಡೆಯುತ್ತಿದ್ದರೂ, ಅಜ್ಞಾನದಿಂದ ಜೀವಾತ್ಮ ತಾನೇ ಮಾಡುತ್ತಿದ್ದಾನೆಂದು ಕೊಳ್ಳುತ್ತಿದ್ದಾನೆ. ಆತ್ಮ ತನ್ನ ಕೆಲಸವನ್ನು ತಾನು ಮಾಡುತ್ತಿರುವುದು. ಆತ್ಮ ಮಾಡಿದ ಕೆಲಸಗಳೇ ಅಲ್ಲದೆ ಆತ್ಮ ತಿಳಿಸಿದ ಪರಿಶೋಧನೆ ಜ್ಞಾನವೂ ಸಹ ಮನುಷ್ಯ ತನ್ನದೇ ಅಂದುಕೊಳ್ಳುತ್ತಿದ್ದಾನೆ.

ಎಷ್ಟೋ ಶರೀರಗಳಲ್ಲಿ ಜೀವಾತ್ಮದ ಜೊತೆಗೆ ಆತ್ಮವೂ ಸಹ ಇದ್ದು ಆ ಶರೀರಕ್ಕೆ ಜೀವನ ವಿಧಾನವನ್ನು ಉಂಟುಮಾಡುತ್ತಿದೆ. ಒಂದೊಂದು ಶರೀರದಲ್ಲಿ ಒಂದೊಂದು ಆತ್ಮವಾಗಿದ್ದು ಎಲ್ಲಾ ಶರೀರದಲ್ಲಿಯೂ ಒಂದೇ ಆಚರಣೆ ಸೂತ್ರ ಹೊಂದಿದೆ. ಆತ್ಮ ಅಂಶ ಒಂದೇ ಆದರೂ ಎಲ್ಲಾ ಶರೀರಗಳಲ್ಲಿ ಎಲ್ಲಾ ಆತ್ಮಗಳು ಇವೆಯೆಂದು ಹೇಳಬಹುದು. ಒಂದೊಂದು ಶರೀರದಲ್ಲಿನ ಆತ್ಮ ಒಂದೊಂದು ವಿಧವಾಗಿ ಹೊರಗಿನ ಪ್ರಪಂಚದಲ್ಲಿನ ಎಲ್ಲ ರಂಗಗಳಲ್ಲಿ ಎಷ್ಟೋ ಉತ್ತಮ ವ್ಯಕ್ತಿಗಳನ್ನಾಗಿ ಅವರಲ್ಲಿನ ಆತ್ಮವೇ ಮಾಡಿದೆ. ಎಷ್ಟೋ ರಹಸ್ಯಗಳನ್ನು ತಿಳಿಸಿ ಮಾನವರ ಅನುಭವಗಳಿಗೆ ಸಂಬಂಧಿಸಿದ ಎಷ್ಟೋ ಸೌಕರ್ಯಗಳನ್ನು ಉಂಟುಮಾಡಿದೆ. ಮಾನವರ ಸುಖಗಳ ನೇಪಥ್ಯದಲ್ಲಿ ಎಷ್ಟೋ ಪರಿಶೋಧನೆಗಳ ವಿಷಯಗಳನ್ನು ತಿಳಿಸಿ ವಿಮಾನ, ಟೀವಿ, ಕಂಪ್ಯೂಟರ್‌ನಂತಹ ಉಪಕರಣಗಳನ್ನು

ರೂಪಿಸಿದೆ. ಮಾನವನಿಗೆ ಪ್ರಪಂಚ ಸಂಬಂಧ ವಿಷಯಗಳನ್ನು ಪರಿಶೋಧನೆಗಳ ರೂಪಗಳಿಂದ ಆತ್ಮ ತಿಳಿಸಿದಾಗ ಅವುಗಳನ್ನು ನಾನು ಕಂಡುಹಿಡಿದಿದ್ದೇನೆಂದು ಮನುಷ್ಯನಲ್ಲಿನ ಜೀವಿಯು ಅಂದುಕೊಳ್ಳುತ್ತಿದ್ದಾನೆ. ಪ್ರತಿ ಹೊಸ ವಿಷಯದಲ್ಲಿಯೂ, ಪ್ರತಿ ಹೊಸ ಪರಿಶೋಧನೆಯಲ್ಲಿಯೂ ಎಲ್ಲಾ ನನ್ನಿಂದಲೇ ನಡೆಯುತ್ತಿವೆ ಎಂದು ಕೊಳ್ಳುವುದು ಮಾನವನ ಸಹಜತ್ವವಾಗಿ ಹೋಗಿದೆ.

ಪ್ರತಿ ಶರೀರದಲ್ಲಿನ ಆತ್ಮ ಆ ಶರೀರವನ್ನು ಎಲ್ಲಾ ವಿಧವಾಗಿ ನಡೆಸುತ್ತಿದೆ. ಕೆಲವು ಶರೀರಗಳಲ್ಲಿ ಮಾತ್ರವೆ ಆ ಶರೀರದಲ್ಲಿನ ಆತ್ಮಗಳು ಪ್ರತ್ಯೇಕವಾದ ಕೆಲಸಗಳು ಮಾಡುತ್ತಿವೆ. ಸಚಿನ್‌ತೆಂಡೂಲ್ಕರ್‌ನಲ್ಲಿನ ಕ್ರೀಡಾ ಪ್ರಾವೀಣ್ಯತೆಯಾಗಲಿ, ಅಬ್ದುಲ್ ಕಲಾಮ್‌ನಲ್ಲಿನ ಪರಿಶೋಧನಾ ಸಾಮರ್ಥ್ಯವಾಗಲಿ, ಮಹಾಗಾಯಕ ನಾದ ಬಾಲಸುಬ್ರಮಣ್ಯಂನವರ ಗಾತ್ರ ಪ್ರಾವೀಣ್ಯವಾಗಲಿ ಎಲ್ಲವೂ ಅವರ ಆತ್ಮಗಳ ಪ್ರತ್ಯೇಕತೆಯೇ ಹೊರತು ಅವರ ಪ್ರತ್ಯೇಕತೆ ಏನು ಇಲ್ಲ. ಪ್ರಪಂಚಪರವಾಗಿ ಎಲ್ಲಾ ರಂಗಗಳಲ್ಲಿ ಅಭಿವೃದ್ಧಿಗೋಸ್ಕರ ಆತ್ಮವೇ ಹೊಸತನವನ್ನು, ಪ್ರಾವೀಣ್ಯತೆ ಯನ್ನು, ಪರಿಶೋಧನಾಯುಕ್ತಿಯನ್ನು ತಿಳಿಸುತ್ತಿದೆ. ವಿಶ್ವದಲ್ಲಿ ಪ್ರಪಂಚ, ಪರಮಾತ್ಮ ಎನ್ನುವ ಎರಡು ತರಗತಿಗಳು ಇವೆ. ಪ್ರಪಂಚ ತರಗತಿಗಳಲ್ಲಿ ಎಷ್ಟೋ ಪರಿಶೋಧನಾ ರೂಪದಿಂದ ಮುಂದಕ್ಕೆ ತೆಗೆದುಕೊಂಡು ಹೋದ ಆತ್ಮ ಮಾನವನನ್ನು ಸುಖಗಳಲ್ಲಿಯೂ ಮತ್ತು ದುಃಖಗಳಲ್ಲಿಯೂ ಮುಳುಗೆಬ್ಬಿಸುತ್ತಿದೆ. ಪ್ರಪಂಚ ಪ್ರಗತಿಯಲ್ಲಿ ಮುಂದಕ್ಕೆ ಹೋದ ಮಾನವನು ಎಲ್ಲಾ ತನ್ನ ಪ್ರಾವೀಣ್ಯತೆಯೇ ಎಂದು ತಿಳಿದುಕೊಳ್ಳುತ್ತಿದ್ದಾನೆ. ಪ್ರಪಂಚ ಸಂಬಂಧವಾದ ಎಷ್ಟೋ ರೋಗಗಳಿಗೆ ಔಷಧಿಗಳು ತಿಳಿಸಿದ ಆತ್ಮ ಎಷ್ಟೋ ಸುಖಗಳಿಗೆ ಉಪಯೋಗಪಡುವ ವಸ್ತುಗಳನ್ನು ಸಹ ತಿಳಿಸಿದೆ. ಇದೆಲ್ಲವೂ ಪ್ರಪಂಚ ತರಗತಿಗೆ ಸಂಬಂಧಿಸಿದ ವಿಷಯಗಳು. ಪ್ರಪಂಚ ತರಗತಿಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ಎಲ್ಲಾರ ಮೂಲಕ ಅಲ್ಲದೆ ಕೆಲವರ ಶರೀರಗಳಿಂದಲೇ ತಿಳಿಸಲಾಗಿದೆ. ಪ್ರಪಂಚ ವಿಷಯಗಳೇ ಅತಿ ಜಾಗ್ರತೆಯಾಗಿ ಕೆಲವರ ಆತ್ಮಗಳಿಂದಲೇ ಹೊರಬಿದ್ದರೆ ಪರಮಾತ್ಮ ತರಗತಿಗೆ ಸಂಬಂಧಿಸಿದ ವಿಷಯಗಳು

ಕೆಲವರ ಶರೀರಗಳಿಂದ ಅಲ್ಲದೆ ಪ್ರತ್ಯೇಕವಾದ ಒಂದು ಶರೀರದಿಂದಲೇ ಹೊರಬೀಳುತ್ತದೆ. ಪ್ರಪಂಚ ಸಂಬಂಧ ವಿಷಯಗಳ ರಹಸ್ಯಗಳು ಪ್ರತ್ಯೇಕತೆ ಹೊಂದಿದ ಕೆಲವರಿಂದ ಬಹಿರಂಗವಾಗಿ, ಪರಮಾತ್ಮ ವಿಷಯ ಒಂದು ಶರೀರದ ಆತ್ಮದಿಂದ ಹೊರಬೀಳುತ್ತದೆಂದು ಮರೆಯಬಾರದು. ಪರಮಾತ್ಮ ವಿಷಯಗಳು ರಹಸ್ಯಗಳು ತಿಳಿಸುವ ಪ್ರತ್ಯೇಕವಾದ ಒಂದೇಒಂದು ಆತ್ಮ ಇರುವ ವ್ಯಕ್ತಿಯನ್ನೇ ಭಗವಂತ ಎನ್ನುತ್ತಿದ್ದೇವೆ. ಪರಮಾತ್ಮ ವಿಷಯಗಳು ಒಬ್ಬ ಭಗವಂತನ ಆತ್ಮಕ್ಕೆ ಹೊರೆತು ಯಾರಿಗೂ ತಿಳಿಯುವುದಿಲ್ಲ. ಮೂರನೆ ಪುರುಷನಾದ ಪರಮಾತ್ಮ ವಿಷಯಗಳನ್ನು ಒಬ್ಬ ಭಗವಂತನ ಆತ್ಮವೇ ತಿಳಿಸಬೇಕಾಗಿದೆ. ಭಗವಂತನಲ್ಲದೆ ಉಳಿದ ಮನುಷ್ಯರಲ್ಲಿ ಆತ್ಮಗಳು ಪ್ರಪಂಚದಲ್ಲಿನ ಎಷ್ಟು ದೊಡ್ಡ ವಿಷಯವನ್ನಾದರು ತಿಳಿಸಬಹುದು.

ಜಗತ್ತಿನಲ್ಲಿ ಭಗವಂತನಾಗಿ ಬಂದವನು ಶ್ರೀಕೃಷ್ಣನು. ಪರಮಾತ್ಮ ಸ್ವತಃ ಭೂಮಿ ಮೇಲೆ ಜನ್ಮ ಪಡೆ (ತಾಳಿ) ದಾಗ ಆ ಜನ್ಮವನ್ನು ಭಗವಂತನೆನ್ನಬಹುದು. ಪುರಾಣಗಳ ಪದ್ಧತಿ ಪ್ರಕಾರ ರಾಮನು ಸಹ ಭಗವಂತನೆಂದು ಅನ್ನುತ್ತಿದ್ದಾರೆ. ಇಲ್ಲಿ ಶಾಸ್ತ್ರವನ್ನು ಬಿಟ್ಟು ಪುರಾಣಗಳನ್ನು ತಿಳಿದುಕೊಳ್ಳಬಾರದೆಂದು ಮನವಿ. ಪರಮಾತ್ಮ ಕೃಷ್ಣನಿಗಿಂತ ಮುಂಚೆ ಯಾವ ಜನ್ಮ ಎತ್ತಿರುವುದು ಯಾರಿಗೂ ತಿಳಿದಿಲ್ಲ. ದಶಾವತಾರಗಳು ಶ್ರೀ ಮಹಾವಿಷ್ಣುವೆಂದು ಹೇಳಿರುವುದಿದೆ. ಆಕಾರ, ಹೆಸರಿರುವ ವಿಷ್ಣುವನ್ನು ಕುರಿತು ಹೇಳಿದ ಜನ್ಮಗಳಲ್ಲದೆ, ಆಕಾರ ಹೆಸರಿಲ್ಲದ ಪರಮಾತ್ಮನನ್ನು ಕುರಿತು ಹೇಳಿದ ಜನ್ಮಗಳನ್ನು ಕುರಿತು ನಾವು ಹೇಳುತ್ತಿದ್ದೇವೆಂದು ತಿಳಿಯಬೇಕು. ಪ್ರಪಂಚವೆಲ್ಲ ಆವರಿಸಿ ಎಲ್ಲರೊಳಗಿರುವ ಪರಮಾತ್ಮ ಸ್ವತಃ ಭಗವದ್ಗೀತೆಯನ್ನು ತಿಳಿಸಿ ಅದರಲ್ಲಿ ಎಷ್ಟೋ ಆಧ್ಯಾತ್ಮಿಕ ರಹಸ್ಯಗಳನ್ನು ತಿಳಿಸಿದ್ದಾನೆ. ಮಾನವನಿಗೆ ತಿಳಿಯದ ಎಷ್ಟೋ ರಹಸ್ಯಗಳು ಭಗವಂತನ ಆತ್ಮದ ಮೂಲಕ ಹೊರಗೆ ಬಂದಿವೆ ಆ ರಹಸ್ಯಗಳಲ್ಲಿ ಮನುಷ್ಯ ಮರಣದ ವಿಷಯ, ಜನ್ಮದ ವಿಷಯಗಳು ಇವೆ. ಅವುಗಳಲ್ಲಿ ಇಲ್ಲಿ ಮರಣ ರಹಸ್ಯವನ್ನು ಮರಣ ಸಿದ್ಧಾಂತವಾಗಿ, ಜನ್ಮರಹಸ್ಯಗಳನ್ನು ಜನನಸಿದ್ಧಾಂತವಾಗಿ ತಿಳಿಸುತ್ತಿದ್ದೇವೆ.

ಹುಟ್ಟಿದಾಗ ಜ್ಞಾಪಕವಿದ್ದರೇನೆ ಜನನ ರಹಸ್ಯ, ಮರಣಿಸಿದಾಗ ಜ್ಞಾಪಕ ಇದ್ದರೇನೆ ಮರಣ ರಹಸ್ಯವನ್ನು ಹೇಳಬಹುದು. ಯಾರಿಗೂ ಜ್ಞಾಪಕ ಇಲ್ಲದಿರುವುದು, ಯಾರಿಗೂ ತಿಳಿಯದಿರುವವು ನೀವು ಹೇಗೆ ಬರೆಯುತ್ತಿದ್ದೀರಾ ಎಂದು ಇತರರು ಕೇಳದಂತೆ ಜನನಸಿದ್ಧಾಂತ ಭಗವದ್ಗೀತೆ ಸಂಖ್ಯಯೋಗದಲ್ಲಿ 22ನೇ ಶ್ಲೋಕ **"ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃರ್ಣಾತಿ ನರೋಪ ರಾಣಿ, ತಥಾ ಶರೀರಾಣಿ ವಿಹಾಯ ಜೀರ್ಣಾ ನ್ಯನ್ಯಾನಿ ಸಂಯಾತಿ ನವಾನಿದೇಹಿ"** ಅನ್ನುವುದರ ಪ್ರಕಾರ ಬರೆದಿದ್ದೇನೆಂದು ಹೇಳುತ್ತಿದ್ದೇವೆ. ಹಾಗೆಯೇ ಮರಣ ಸಿದ್ಧಾಂತವೂ ಸಹ ಅಕ್ಷರ ಪರಬ್ರಹ್ಮಯೋಗ ಆರನೇ ಶ್ಲೋಕ **"ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯನಂತೇ ಕಳೇಬರಮ್, ತಂ ತಮೇವೈತಿ ಕೌಂತೇಯ! ಸದಾ ತದ್ಭಾವ ಭಾವಿತಃ"** ಎನ್ನುವುದರ ಪ್ರಕಾರ ಬರೆದಿದ್ದೇನೆಂದು ತಿಳಿಸುತ್ತಿದ್ದೇವೆ.

ಆತ್ಮ ಎಂತಹ ರಹಸ್ಯವನ್ನಾದರು ತಿಳಿಸುತ್ತದೆ. ಪ್ರತ್ಯೇಕಿಸಿ ಭಗವಂತನ ಆತ್ಮ ಪರಮಾತ್ಮ ವಿಷಯಗಳನ್ನು ತಿಳಿಸುತ್ತಾನೆ. ಭಗವಂತನ ಆತ್ಮ ತಿಳಿಸಿದ ವಿಷಯಗಳನ್ನೇ ಇದಕ್ಕೂ ಮೊದಲು ಎಷ್ಟೋ ತಿಳಿಸಿದ್ದೇವೆ. ಈಗಲೂ ಸಹ ಭಗವಂತನ ಆತ್ಮ ತಿಳಿಸಿದ ವಿಷಯಗಳನ್ನೇ ತಿಳಿಯಪಡಿಸುತ್ತಿದ್ದೇವೆಂದು ಅಸೂಯೆ ಇಲ್ಲದಂತೆ ಅರ್ಥ ಮಾಡಿಕೊಳ್ಳುತ್ತಾರೆಂದುಕೊಳ್ಳುತ್ತಿದ್ದೇವೆ. ಮುಖ್ಯವಾಗಿ ಭಗವಂತನು ತಿಳಿಸಿದ ಎಲ್ಲಾ ವಿಷಯಗಳನ್ನು ಮಾಯೆಯಲ್ಲಿರುವ ಮನುಷ್ಯ ಅಷ್ಟು ಸುಲಭವಾಗಿ ನಂಬಲಾರನು. ಜನನ ಮರಣ ರಹಸ್ಯಗಳು ಸಹ ಅಂತಹವೆಯಾದ್ದರಿಂದ ಜಾಗ್ರತೆಯಾಗಿ ಪರಿಶೀಲಿಸಬೇಕೆಂದು ಕೋರುತ್ತಿದ್ದೇವೆ. ಸ್ವಲ್ಪ ಓದಿ ತಕ್ಷಣ ಒಂದು ನಿರ್ಣಯಕ್ಕೆ ಬರದೆ ಪೂರ್ತಿ ಓದಿ ಅರ್ಥ ಮಾಡಿಕೊಳ್ಳಬೇಕೆಂದು ತಿಳಿಸುತ್ತಿದ್ದೇವೆ. ಜನನ ಮರಣಗಳ ವಿವರಗಳು ರಹಸ್ಯಗಳಾದ್ದರಿಂದ ಅವು ಹೊಸದಾಗಿ ಕಾಣಿಸಿ ನಂಬಲಾರದಂತೆ ಇವೆ. ಆದ್ದರಿಂದಲೆ ಇಷ್ಟು ವಿವರವಾಗಿ ಹೇಳಬೇಕಾಗಿ ಬಂದಿದೆ. ಜನನ ಮರಣ ವಿಷಯಗಳೆಲ್ಲ ಭಗವಂತನ ಆತ್ಮದಿಂದ ತಿಳಿಸಲಾದ ವಿಷಯಗಳೆಂದು, ಜೀವಾತ್ಮನಾದ ನನ್ನವು ಅಲ್ಲವೆಂದು ತಿಳಿಯಬೇಕು. ಈಗ ಮರಣವನ್ನು ಕುರಿತು ವಿವರ ನೋಡೋಣ.

ಮನುಷ್ಯನಿಗೆ ಮರಣಗಳು ಎರಡು ವಿಧಗಳು ಇವೆ. ಒಂದು ಆಕಾಲಮರಣ, ಎರಡನೆಯದು ಕಾಲಮರಣ ಎನ್ನುತ್ತೇವೆ. **ಪೂರ್ತಿ ಶರೀರವನ್ನು ಬಿಡದೆ ಶರೀರದಲ್ಲಿನ ಹತ್ತು ಭಾಗಗಳನ್ನು ಮಾತ್ರವೆ ಬಿಟ್ಟವರ ಮರಣವನ್ನು ಅಕಾಲಮರಣ ಎನ್ನುತ್ತೇವೆ. ಅಕಾಲಮರಣ ಹೊಂದಿದವರು ಉಳಿದ ಹದಿನಾಲ್ಕು ಶರೀರಭಾಗಗಳಿಂದ ಜೀವಿಸುತ್ತಲೇ ಇರುತ್ತಾರೆ. ಪೂರ್ತಿಯಾಗಿ 24 ಭಾಗಗಳನ್ನು ಬಿಟ್ಟವರದು ಕಾಲಮರಣ ಆಗುತ್ತದೆ.** ಅಕಾಲಮರಣ ಹೊಂದಿದವರು ನಮಗೆ ಕಾಣಿಸದಂತೆ ಜೀವಿಸಿರುತ್ತಾರೆ. ಆದ್ದರಿಂದ ಅದು ಹೆಸರಿಗೆ ಮರಣವೇ ಆಗಲಿ ಪೂರ್ತಿಮರಣ ಅಲ್ಲವೆಂದು ತಿಳಿಯಬೇಕು. ಕಾಲಮರಣ ಹೊಂದಿದವರು ಮಾತ್ರವೇ ಪೂರ್ತಿ ಶರೀರವನ್ನು ಬಿಟ್ಟು ಮರುಜನ್ಮಕ್ಕೆ ಹೋಗುತ್ತಾರೆ. ಅಂತಹ ಮರಣವನ್ನು ಕುರಿತು ಈಗ ತಿಳಿದುಕೊಳ್ಳೋಣ. ಮರಣ ಎಂದರೆ ಅರ್ಥವನ್ನು ಮೊದಲೇ ತಿಳಿದುಕೊಂಡಿದ್ದೇವೆ. ಮರಣ ಸಮಯದಲ್ಲಿ ಏನು ನಡೆಯುತ್ತಿದೆಯೋ, ಆ ಸಮಯದಲ್ಲಿ ಜೀವಾತ್ಮ ಯಾವ ಅನುಭೂತಿ ಪಡೆಯುತ್ತಿದ್ದಾನೋ, ಪರಿಸ್ಥಿತಿ ಹೇಗಿರುತ್ತದೋ, ಜೀವಾತ್ಮ ಶರೀರವನ್ನು ಯಾವ ವಿಧವಾಗಿ ಬಿಟ್ಟು ಹೋಗುತ್ತಿದ್ದಾನೋ ತಿಳಿಯಬೇಕಾಗಿದೆ. ಶರೀರವು ಜೀವಾತ್ಮ ಸೇರಿ ಒಟ್ಟಾರೆ 25 ಭಾಗಗಳಾಗಿದೆ. ಜೀವಾತ್ಮ ನಂತರ ಇರುವ 24 ಭಾಗಗಳನ್ನು ಶರೀರದಲ್ಲಿನ ಆತ್ಮವೇ ಶಕ್ತಿಯನ್ನು ಕೊಟ್ಟು ನಡೆಸುತ್ತಿದೆ. ಶರೀರದಲ್ಲಿನ ಆತ್ಮ ಪರಮಾತ್ಮರನ್ನು ಭಾಗಗಳಾಗಿ ಲೆಕ್ಕಿಸುತ್ತಿಲ್ಲ. ಶರೀರ ಭಾಗಗಳಾಗಿ ಲೆಕ್ಕಿಸುವುದಕ್ಕೆ ಒಂದು ಸೂತ್ರವಿದೆ. ಶರೀರದಲ್ಲಿ ಪ್ರತ್ಯೇಕವಾದ ಕೆಲಸಗಳು ಮಾಡುವವು ಜೀವಾತ್ಮಯೊಂದಿಗೆ ಒಟ್ಟು 25 ಇವೆ. ಆತ್ಮ ಎಲ್ಲಾ ಭಾಗಗಳಿಗೂ ಶಕ್ತಿಯನ್ನು ಕೊಟ್ಟು ಆಡಿಸುತ್ತಾ ಶರೀರವೆಲ್ಲಾ ವ್ಯಾಪಿಸಿರುವುದರಿಂದ ಅದನ್ನು ಭಾಗವಾಗಿ ಲೆಕ್ಕಿಸುವುದಕ್ಕೆ ಸಾಧ್ಯವಿಲ್ಲ. **25 ಭಾಗಗಳಾಗಿರುವ ಶರೀರವನ್ನು "ಸಜೀವ ಶರೀರ" ಎನ್ನುತ್ತೇವೆ. 25 ಭಾಗಗಳಲ್ಲಿ 10 ಭಾಗಗಳಾದ ಮೇಲಿನ ಶರೀರವನ್ನು "ಸ್ಥೂಲ ಶರೀರ" ಎನ್ನುತ್ತೇವೆ. 15 ಭಾಗಗಳಾದ ಒಳಗಿನ ಶರೀರವನ್ನು "ಸೂಕ್ಷ್ಮ ಶರೀರ" ಎನ್ನುತ್ತೇವೆ.** ಶರೀರವು ಸ್ಥೂಲ, ಸ್ಥೂಕ್ಷ್ಮವೆಂದು ಎರಡು ವಿಧಗಳಾಗಿ ಇದೆ. ಭೂಮಿ ಮೇಲೆ ಸ್ಥೂಲಶರೀರ ಇಲ್ಲದಂತೆ ಸೂಕ್ಷ್ಮಶರೀರ ಇರುತ್ತದೆ ಆದರೆ, ಸೂಕ್ಷ್ಮಶರೀರ ಇಲ್ಲದಂತೆ ಸ್ಥೂಲ

ಶರೀರ ಇರುವುದಿಲ್ಲ. ಸ್ಥೂಲಶರೀರವನ್ನು ಮೇಲಿನ ಶರೀರವೆಂದು ಸೂಕ್ಷ್ಮ ಶರೀರವನ್ನು ಒಳಗಿನ ಶರೀರವೆಂದು ಸಹ ಹೇಳಬಹುದು. ಒಳಗಿನ ಶರೀರದಲ್ಲಿಯೇ ಜೀವಾತ್ಮ ಸಹ ಇರುತ್ತದೆ. ಜೀವಾತ್ಮ ಇರುವಂತಹ ಒಳಗಿನ ಶರೀರವು ಹೋದರೆ ಮೇಲಿನ ಶರೀರವು ಮೃತದೇಹವಾಗುತ್ತದೆ. ಒಳಗಿನ ಶರೀರ ಇರುವವರೆಗೂ ಮೇಲಿನ ಶರೀರಕ್ಕೆ ಬೆಲೆ ಇರುತ್ತದೆ. ಒಳಗಿನ ಶರೀರವು ಇಲ್ಲದಿದ್ದರೆ ಮೇಲಿನ ಶರೀರವು ಮರಣಿಸಿದ ಶರೀರವಾಗಿ ಕೆಟ್ಟು ಹೋಗುತ್ತದೆ. ಸ್ಥೂಲ, ಸೂಕ್ಷ್ಮಶರೀರಗಳಾದ ಸಜೀವ ಶರೀರವನ್ನು ಕುರಿತು ತಿಳಿದುಕೊಂಡ ನಂತರ ಮರಣವನ್ನು ಕುರಿತು ಸುಲಭವಾಗಿ ತಿಳಿಯಬಹುದು.

ಮನೆಯಲ್ಲಿನ ಫ್ಯಾನ್‌ನಿಂದ ಗಾಳಿ ಬೀಸುತ್ತದೆ, ಲೈಟ್ ಬೆಳಕನ್ನು ಕೊಡುತ್ತದೆ, ಟೀವಿ ಸಿನಿಮಾವನ್ನು ತೋರಿಸುತ್ತದೆ. ಇವೆಲ್ಲವೂ ಅವುಗಳ ಕೆಲಸವನ್ನಿಡಿದು ಬಿಡಿ ಬಿಡಿಯಾದ ಪರಿಕರಗಳೇ ಆದರೂ ಎಲ್ಲದಕ್ಕೂ ಒಂದು ಶಕ್ತಿ ಅಗತ್ಯ. ಅದುವೆ ವಿದ್ಯುತ್‌ಶಕ್ತಿ. ಹಾಗೆಯೇ ಶರೀರವೆಂಬ ಮನೆಯಲ್ಲಿ 25 ಪರಿಕರಗಳು ಇವೆ. ಎಲ್ಲಾ ಬೇರೆ ಬೇರೆ ಕೆಲಸಗಳು ಮಾಡುತ್ತಿದ್ದರೂ ಎಲ್ಲದಕ್ಕೂ ಒಂದು ಶಕ್ತಿ ಅಗತ್ಯ ಅದುವೇ ಆತ್ಮಶಕ್ತಿ. ಆತ್ಮಶಕ್ತಿ ಎಲ್ಲಾ ಅವಯವಗಳಿಗೂ ಪ್ರಸಾರಮಾಡುತ್ತಾ ಅವುಗಳಿಂದ ವಿವಿಧ ಕೆಲಸಗಳು ಮಾಡಿಸುತ್ತಿದೆ. ಶರೀರದ ಹೊರಗಿನ ಅವಯವಗಳಿಗಾಗಲಿ, ಒಳಗಿನ ಅವಯವಗಳಿಗಾಗಲಿ ಆತ್ಮಶಕ್ತಿಯೇ ಆಧಾರವಾಗಿದೆ. ಇದು ಸಜೀವ ಶರೀರಕ್ಕಿರುವ ವಿಧಾನ. ಶರೀರಕ್ಕೆ ಆಯುಷ್ಷು ಮುಗಿದುಹೋದಾಗ ಮರಣ ಸಮೀಪಿಸುತ್ತದೆ. ಮರಣ ಬರುವ ಸಮಯ ದವರೆಗೂ ಶರೀರದಲ್ಲಿ ಎಲ್ಲಾ ಅವಯವಗಳು ಕೆಲಸ ಮಾಡುತ್ತಿರುತ್ತವೆ. ಶರೀರದಲ್ಲಿ ಪ್ರತಿ ಕೆಲಸವನ್ನು ಆತ್ಮವೇ ಮಾಡಿಸುತ್ತಿದೆಯೆಂದು ಹೇಳಿಕೊಂಡಿದ್ದೇವೆ! ಒಂದು ಶರೀರದಲ್ಲಿ ಒಂದು ಕೆಲಸ ನಡೆದಿದೆ ಎಂದರೆ ಆ ಕೆಲಸದಲ್ಲಿನ ಕಷ್ಟವನ್ನಾಗಲಿ, ಸುಖವನ್ನಾಗಲಿ ಆ ಶರೀರದಲ್ಲಿನ ಜೀವಾತ್ಮ ಅನುಭವಿಸುವು ದಕ್ಕೆಂದು ತಿಳಿಯಬೇಕು. ಉದಾಹರಣೆಗೆ ದಾರಿಯಲ್ಲಿ ಒಬ್ಬನಿಗೆ ಹತ್ತು ಕೇಜಿಗಳ ಅಕ್ಕಿಯ ಮೂಟೆ ದೊರೆತಿದೆ ಎಂದುಕೊಳ್ಳೋಣ, ಆ ಮೂಟೆಯನ್ನು ಅವನು ಎರಡು

ಕಿಲೋಮೀಟರ್‌ಗಳು ಹೊತ್ತುಕೊಂಡು ಹೋಗಬೇಕಾಗಿದೆ. ಮೂಟೆಯನ್ನು ಹೊತ್ತು ಕೊಂಡುಹೋಗುವಾಗ ಭಾರವನ್ನು ಬಾಧೆಯನ್ನು ಸಹ ಅನುಭವಿಸುತ್ತಿದ್ದಾನೆ. ಈ ಕಾರ್ಯದಲ್ಲಿ ಜೀವಾತ್ಮ ಸ್ವಲ್ಪ ಸುಖವನ್ನು, ಸ್ವಲ್ಪ ದುಃಖವನ್ನು ಎರಡನ್ನು ಅನುಭವಿಸುತ್ತಿದ್ದಾನೆ. ಈ ಕಾರ್ಯ ನಡೆಯುವುದಕ್ಕೆ ಉಪಯೋಗಪಟ್ಟ ಶರೀರ ಭಾಗಗಳೆಲ್ಲವುಕ್ಕೂ ಆತ್ಮಶಕ್ತಿ ಆಧಾರವಾಗಿದೆ. ಆತ್ಮ ತನ್ನ ಶಕ್ತಿಯಿಂದ ಆ ಕಾರ್ಯಮಾಡಿಸಿದರೂ ಜೀವಾತ್ಮ ಸ್ವಲ್ಪ ಪ್ರಾರಬ್ಧಕರ್ಮವನ್ನು ಅನುಭವಿಸುವುದು, ಸ್ವಲ್ಪ ಆಕಾಮಿಕಕರ್ಮವನ್ನು ಸಂಪಾದಿಸಿಕೊಳ್ಳುವುದು ನಡೆದಿದೆ. ನಡೆದ ಕಾರ್ಯ ಎಲ್ಲರಿಗೂ ಕಾಣಿಸಿದರೂ ಕಾರ್ಯನಡೆಯುವುದಕ್ಕೆ ಕಾರಣವಾದ ಪ್ರಾರಬ್ಧ ಯಾರಿಗೂ ಕಾಣಿಸುವುದಿಲ್ಲ. ಹಾಗೆಯೇ ಕಾರ್ಯದಲ್ಲಿ ಉತ್ಪನ್ನವಾದ ಆಗಾಮಿಕಕರ್ಮವೂ ಸಹ ಯಾರಿಗೂ ಕಾಣಿಸುವುದಿಲ್ಲ. ಆತ್ಮವೇ ಎಲ್ಲಾ ಕೆಲಸಗಳನ್ನು ಮಾಡಿಸುತ್ತಿದ್ದರೂ ಆತ್ಮ ಹಾಗೆ ಮಾಡಿಸುವುದಕ್ಕೂ ಸಹ ಪ್ರಾರಬ್ಧಕರ್ಮ ಕಾರಣವಾಗಿದೆ. ಅದಕ್ಕೆ ವಿವಿಧ ಕರ್ಮಗಳಿರುವ ಮನುಷ್ಯರಿಂದ ವಿವಿಧ ರೀತಿಗಳಾಗಿ ಆತ್ಮ ಕೆಲಸಮಾಡುತ್ತಿದೆ. ಹಾಗೆ ಮಾಡಿಸುವುದರಿಂದ ಜಗತ್ತಿನಲ್ಲಿ ಚಿತ್ರವಿಚಿತ್ರವಾಗಿ ಕೆಲಸಗಳು ಕಾಣಿಸುತ್ತಿವೆ.

ಅನೇಕ ವಿಧಗಳಾಗಿ ಕೆಲಸಗಳು ನಡೆಯುತ್ತಿರುವ ಜಗತ್ತಿನಲ್ಲಿ ಮಾಡಿಸುತ್ತಿರುವ ಆತ್ಮವಾಗಲಿ, ಮಾಡಿಸುತ್ತಿರುವ ಕರ್ಮವಾಗಲಿ, ಯಾರಿಗೂ ಕಾಣಿಸುವುದಿಲ್ಲ. ಅನುಭವಿಸುತ್ತಿರುವ ಜೀವಾತ್ಮ ಮಾತ್ರ ತನ್ನಸ್ಥಿತಿ ತಾನು ತಿಳಿದುಕೊಳ್ಳದೆ ನಡೆಯುತ್ತಿರುವ ಎಲ್ಲದಕ್ಕೂ ನಾನೇ ಕರ್ತನೆಂದುಕೊಳ್ಳುತ್ತಿದ್ದಾನೆ. ಶರೀರದಲ್ಲಿ ಕರ್ಮಮಾಡಿಸುವುದು, ಆತ್ಮಮಾಡುವುದು ತಿಳಿಯದ ಜೀವಾತ್ಮ ನಾನೇ ಕರ್ತನೆಂದುಕೊಳ್ಳುವುದು ಹೇಗೆ ನಡೆಯುತ್ತಿದೆಯೋ ಉದಾಹರಣೆ ಯೊಂದಿಗೆ ವಿಶದಪಡಿಸಿಕೊಂಡು ನೋಡೋಣ. ಇದಕ್ಕೂ ಮುಂಚೆ ಹತ್ತುಕೇಜಿಗಳ ಅಕ್ಕಿ ಮೂಟೆಯ ವಿಷಯ ಹೇಳಿಕೊಂಡಿದ್ದೇವೆ! ಅದರ ವಿಷಯವೇ ನೋಡೋಣ ಒಬ್ಬನು ಕೂಲಿನಾಲಿ ಮಾಡಿ ಸ್ವಲ್ಪ ಹಣವನ್ನು ಕೂಡಿಟ್ಟುಕೊಂಡು ಪಕ್ಕದ ಊರಿನಲ್ಲಿ ಗವರ್ನಮೆಂಟ್ ಸ್ಟೋರ್‌ನಲ್ಲಿ (ನ್ಯಾಯಬೆಲೆ ಅಂಗಡಿಯಲ್ಲಿ) ಎರಡು

ರೂಪಾಯಿಗಳಿಗೆ ಕೇಜಿ ಪ್ರಕಾರ ಹತ್ತು ಕೇಜಿಗಳ ಅಕ್ಕಿಯನ್ನು ತೆಗೆದುಕೊಂಡು ತನ್ನ ಊರಿಗೆ ಹೋಗುತ್ತಿದ್ದನು. ದಾರಿಮಧ್ಯದಲ್ಲಿ ಬಹಿರ್ಭೂಮಿಗೆ ಹೋಗಬೇಕಾಗಿ ಬಂದಿದೆ. ಬಹಿರ್ಭೂಮಿಗೆ ಅಂದರೆ ಯಾವುದೋ ಯುದ್ಧರಂಗಕ್ಕೆ ಅಂದು ಕೊಳ್ಳಬೇಡಿ ಕಾಲಕೃತ್ಯಗಳು ತೀರಿಸಿಕೊಳ್ಳುವುದಕ್ಕೆಂದು ಅರ್ಥ. ಅಕ್ಕಿ ಮೂಟೆಯನ್ನು ಏಕೆ ಹಿಂದೆ ತೆಗೆದುಕೊಂಡು ಹೋಗಬೇಕೆಂದು ದಾರಿಪಕ್ಕದಲ್ಲಿ ಇಟ್ಟು ಸ್ವಲ್ಪದೂರದಲ್ಲಿ ಒಂದು ಪೊದೆ ಮರೆಯಲ್ಲಿ ಹೋಗಿ ಕುಳಿತುಕೊಂಡಿದ್ದಾನೆ. ಅಷ್ಟರಲ್ಲಿಯೇ ಮತ್ತೊಬ್ಬನು ಆ ದಾರಿಯಲ್ಲಿ ಬರುವುದು, ಆ ಮೂಟೆಯನ್ನು ನೋಡುವುದು ನಡೆದಿದೆ. ಅವನ ಶರೀರದಲ್ಲಿ ಕಣ್ಣುಗಳ ನೋಟ ಆ ಮೂಟೆಯ ಮೇಲೆ ಬಿದ್ದತಕ್ಷಣ ಕಣ್ಣುಗಳವರೆಗೂ ವ್ಯಾಪಿಸಿದ ಮನಸ್ಸು ಆ ವಿಷಯವನ್ನು ತೆಗೆದುಕೊಂಡು ಒಳಗಿರುವ ಬುದ್ಧಿಗೆ ತಿಳಿಸಿತು. ಹೊರಗಿನ ವಿಷಯವನ್ನು ಗ್ರಹಿಸಿದ ಬುದ್ಧಿ ಒಳಗೆ ತನ್ನ ಸುತ್ತ ಇರುವ ಗುಣಗಳಿಂದ ಯೋಚಿಸುವುದು ಮೊದಲು ಮಾಡಿದೆ. ಗುಣಗಳು ಒಳ್ಳೆಯ ಕೆಟ್ಟ ಎರಡು ವಿಧಗಳಾಗಿ ಇರುತ್ತವಾದ್ದರಿಂದ ಬುದ್ಧಿಗೆ ಎರಡು ವಿಧಗಳ ಆಲೋಚನೆಗಳು ಬಂದಿರುವವು ಅವು ಹೀಗೆ ಇವೆ.

**ಒಳ್ಳೆಯಗುಣ–ಯಾರದೋ ಮೂಟೆ ಕೆಳಗೆ ಬೀಳಿಸಿಕೊಂಡು ಹೋಗಿದ್ದಾರೆ.**

**ಕೆಟ್ಟಗುಣ–ಯಾರದಾದರೆ ಏನು, ಈಗ ಯಾರು ಇಲ್ಲ! ತೆಗೆದುಕೊಳ್ಳೋಣ.**

**ಒಳ್ಳೆಯಗುಣ–ಮೂಟೆಬಿದ್ದುಹೋದ ವಿಷಯ ತಿಳಿದು ಮತ್ತೆ ಬಂದು ತೆಗೆದು ಕೊಂಡು ಹೋಗುತ್ತಾನೆ. ನಾವೇತಕ್ಕೆ ತೆಗೆದುಕೊಂಡುಹೋಗಬೇಕು? ಬೇಡ.**

**ಕೆಟ್ಟಗುಣ–ಯಾರು ಇಲ್ಲದಿರುವಾಗ ದೊರೆತಿರುವುದು ನಮ್ಮ ಹೊಡೆವೆಯೇ ತೆಗೆದುಕೋ.**

**ಒಳ್ಳೆಯಗುಣ–ಕಳೆದುಕೊಂಡವನು ಬಂದುನೋಡಿ ಯಾರೋ ಎತ್ತುಕೊಂಡು ಹೋಗಿದ್ದಾರೆಂದು ದುಃಖಪಡುತ್ತಾನೆ!**

**ಕೆಟ್ಟಗುಣ–ಕಳೆದುಕೊಂಡಿರುವುದು ಅವನ ತಪ್ಪೇ. ದೊರೆತರೆ ತೆಗೆದುಕೊಳ್ಳ ಬಾರದಾ!**

**ಒಳ್ಳೆಗುಣ–ಕಳೆದುಕೊಂಡವನು ನನ್ನ ಒಡೆವೆಹೋಗಿದೆ ಎಂದು ದುಃಖ ಪಡುತ್ತಾನೆ.**

**ಕೆಟ್ಟಗುಣ–ಯಾರೋ ದುಃಖಪಡುತ್ತಾನೆಂದು ಸಿಕ್ಕಿರುವುದನ್ನು ಬಿಟ್ಟು ಹೋಗುವುದಾ?**

**ಒಳ್ಳೆಗುಣ–ಇದು ಕೆಟ್ಟಕೆಲಸ ತೆಗೆದುಕೊಳ್ಳಬೇಡ.**

**ಕೆಟ್ಟಗುಣ–ಒಳ್ಳೆಯದು ಕೆಟ್ಟದು ಎಂದು ನೀತಿಗೆ ಹೋದರೆ ಬದುಕುವುದಿಲ್ಲ ಮೊದಲು ತೆಗೆದುಕೋ!**

ಹೀಗೆ ಎರಡು ವಿಧಗಳ ಗುಣಗಳಿಂದ ಬುದ್ಧಿ ಯೋಚಿಸಿದಾಗ ಆ ಕೆಲಸ ನಡೆಯುವುದೋ, ನಡೆಯದೆ ಹೋಗುವುದೋ ಕರ್ಮವನ್ನನುಸರಿಸಿ ನಿರ್ಣಯವಿರುತ್ತದೆ. ಪ್ರಾರಬ್ಧ ಕರ್ಮದಪ್ರಕಾರ ಆ ಮಾತನ್ನು ತೆಗೆದುಕೊಂಡು ಹೋಗುವುದು ಇದೆ. ಎರಡುವಿಧಗಳ ಯೋಚನೆಗಳನ್ನು ಬುದ್ಧಿ ಯೋಚಿಸಿ ಯಾವಕಡೆಯೂ ನಿರ್ಣಯಮಾಡದಂತಿರುತ್ತದೆ. ಬುದ್ಧಿ ಗುಣಗಳನ್ನು ಹಿಡಿದು ಯೋಚಿಸುವುದೇ ಹೊರತು ನಿರ್ಣಯ ಮಾಡುವುದು ಅಲ್ಲ. ನಿರ್ಣಯ ಮಾಡುವುದು ಬುದ್ಧಿ ಪಕ್ಕದಲ್ಲಿಯೇ ಇರುವ ಚಿತ್ತ. ಬುದ್ಧಿ ಯೋಚಿಸಿದ ವಿಷಯಗಳಲ್ಲಿ ಒಂದನ್ನು ನಿರ್ಣಯಿಸುತ್ತದೆ. ಚಿತ್ತಿಸುವುದನ್ನೆ ನಿರ್ಣಯ ಮಾಡುವುದು ಇಲ್ಲವೇ ಒಪ್ಪಿಕೊಳ್ಳುವುದು ಎನ್ನುತ್ತೇವೆ. ಚಿತ್ತವು ಒಳ್ಳೆಯದನ್ನೊ ಕೆಟ್ಟದನ್ನೊ ಯಾವುದೋ ಒಂದನ್ನು ನಿರ್ಣಯಿಸಬೇಕಾಗಿದೆ. ಜೀವಿಯು ಹಿಂದಿನ ಜನ್ಮದಲ್ಲಿ ಮಾಡಿಕೊಂಡ ಪ್ರಾರಬ್ಧಕರ್ಮದ ಪ್ರಕಾರ ಏನು ನಡೆಯಬೇಕೋ ಏನು ನಡೆಯಬಾರದೋ ಅದರ ಪ್ರಕಾರ ಚಿತ್ತವು ನಿರ್ಣಯಿಸುತ್ತದೆ. ಮೂಟೆಯನ್ನು ತೆಗೆದುಕೊಂಡು ಸ್ವಲ್ಪ ಸಂತೋಷವನ್ನು, ಎರಡು ಕಿಲೋಮೀಟರ್ ಗಳು ಹೊತ್ತುಕೊಂಡು ಸ್ವಲ್ಪ ಭಾರದ ಬಾಧೆಯನ್ನು ಅನುಭವಿಸಬೇಕಾಗಿದೆ ಆದ್ದರಿಂದ ಅವನಲ್ಲಿನ ಚಿತ್ತವು ಮೂಟೆಯನ್ನು ತೆಗೆದುಕೊಂಡು ಹೋಗೆಂದು ನಿರ್ಣಯಿಸಿದೆ. ಆಗ ಆ ವಾರ್ತೆ ಚಿತ್ತದಿಂದ ಮನಸ್ಸಿಗೆ ಸೇರಿದಾಗ ಮನಸ್ಸಿನಿಂದ

ಬಾಹ್ಯ ಕರ್ಮೇಂದ್ರಿಯಗಳಾದ ಕಾಲು ಕೈಗಳಿಗೆ ಸೇರುತ್ತದೆ. ಮನಸ್ಸಿನಿಂದ ಬಂದಿರುವ ವಾರ್ತೆಯನ್ನು ಕಾಲು ಕೈಗಳು ಆಚರಿಸುತ್ತಿವೆ. ಇದರಲ್ಲಿ ಜೀವಿಯ ಪ್ರಮೇಯ ಸ್ವಲ್ಪವೂ ಇಲ್ಲ. ಕಾರ್ಯದ ಪ್ರಾರಂಭದಲ್ಲಿ ತನಗೇನೋ ಲಾಭಬಂದಿದೆ ಎಂದು ಸ್ವಲ್ಪ ಸಂತೋಷ ಪಡುವುದು, ಎತ್ತಿಕೊಂಡಾಗ ಬಾಧೆಯನ್ನು ಅನುಭವಿಸುವುದು ಜೀವಿಯ ಕೆಲಸವಾಗಿದೆ. ಅಂದರೆ ನಡೆದ ಕೆಲಸದಲ್ಲಿನ ಕಷ್ಟ ಸುಖಗಳನ್ನು ಅನುಭವಿಸುವುದು ಬಿಟ್ಟರೆ ಕೆಲಸ ನಡೆಯುವುದರಲ್ಲಿ ಯಾವ ವಿಧವಾದ ಜೋಕ್ಯವು ಜೀವಿಗೆ ಇಲ್ಲ. ಈ ಕಾರ್ಯಕ್ಕೆ ಮೂಲ ಪ್ರಾರಬ್ಧ ಕರ್ಮವಾದ್ದರಿಂದ ಅವಯವಗಳಿಗೆ ಶಕ್ತಿಯನ್ನು ಕೊಟ್ಟು ನಡೆಸುವುದು ಆತ್ಮ. ಶರೀರದಲ್ಲಿನ ಹೊರಗಿನ ಕರ್ಮೇಂದ್ರಿಯಗಳಾದ ಕಾಲುಕೈಗಳು ಕಾರ್ಯದಲ್ಲಿ ಉಪಯೋಗವಾಗಿವೆ. ಅಷ್ಟೇ ಅಲ್ಲದೆ ನಡೆದ ಕೆಲಸಕ್ಕೆ ನಾನೇ ಕರ್ತನೆಂದು ಕೊಳ್ಳುವಂತೆ ಜೀವಿಗೆ ಅಹಮ್ ಬೋಧಿಸುತ್ತಿದೆ. ಅಹಮ್, ಚಿತ್ತದ ಪಕ್ಕದಲ್ಲೇ ಇದೆ. ಅಹಮ್ ಒಂದರ ಭಾವವನ್ನು ಹೊಂದಿದ ಜೀವಿಯು ತನಗೆ ಸಂಬಂಧ ವಿಲ್ಲದಿರುವುದನ್ನು ನಾನೇ ಮಾಡಿದ್ದೇನೆಂದುಕೊಳ್ಳುವುದರಿಂದ ಕಾರ್ಯದಲ್ಲಿನ ಹೊಸಕರ್ಮವಾದ ಆಗಾಮಿಕಕರ್ಮ ಜೀವಿಗೆ ತಗಲಿಕೊಳ್ಳುತ್ತಿದೆ. ಶರೀರದಲ್ಲಿನ ಜೀವಾತ್ಮ, ಬುದ್ಧಿ, ಚಿತ್ತ, ಅಹಮ್ ಒಂದರ ಆಕಾರವನ್ನು ಕೆಳಗಿನ ಚಿತ್ರದಲ್ಲಿ ನೋಡಬಹುದು.



ದಾರಿಯಲ್ಲಿನ ಅಕ್ಕಿ ಮೂಟೆಯದೃಶ್ಯ ಬುದ್ಧಿಗೆ ತಿಳಿದಾಗ ತಲೆಯಲ್ಲಿನ ಗುಣಗಳು ಕೆಲಸ ಮಾಡಿವೆ. ಒಳಗಿನ ಗುಣಗಳು ಒಳ್ಳೆಯ ಕೆಟ್ಟ ವರ್ಗಗಳೆಂದು ಎರಡುವಿಧಗಳು ಇವೆ. ಕೆಟ್ಟವರ್ಗದಲ್ಲಿನ ಆಸೆ ಎನ್ನುವ ಗುಣ ಅಕ್ಕಿ ಮೂಟೆಯನ್ನು ಕುರಿತು ಯೋಚನೆಗಳು ಕೊಡುವಾಗ ಅದಕ್ಕೆ ವಿರುದ್ಧ ವರ್ಗವಾದ ಒಳ್ಳೆಯಗುಣ ಗಳಿಂದಲೂ ಸಹ ಯೋಚನೆಗಳು ಬಂದಿವೆ. ಆಗಿನ ಕರ್ಮಾನುಸಾರ ನಿರ್ಣಯ ನಡೆದಿದೆ. ಇಲ್ಲಿ ಈ ಕೆಲಸದಲ್ಲಿ ಆಸೆ ಎಂಬ ಗುಣ ಕೆಲಸಮಾಡಿದೆ ಎಂದು ಕೆಲವು ಸಂದರ್ಭಗಳಲ್ಲಿ ಬೇರೆ ಬೇರೆ ಕೆಲಸಗಳಲ್ಲಿ ಆ ಕಾರ್ಯಗಳಿಂದ ಬೇರೆ ಬೇರೆ ಗುಣಗಳು ಕೆಲಸಮಾಡುತ್ತಿವೆ. ಗುಣಗಳಲ್ಲಿಯೇ ಯಾವಾಗಲು ಜೀವಾತ್ಮ, ಬುದ್ಧಿ, ಚಿತ್ತ, ಅಹಮ್ ನಿವಾಸಮಾಡುತ್ತಿವೆ. ಗುಣಗಳಲ್ಲಿ ಜೀವಿಯಿರುವ ಚಿತ್ರವನ್ನು ನಂತರ ಪುಟದಲ್ಲಿ ನೋಡಿ.

ಜೀವಾತ್ಮ ಶೂನ್ಯವಾದ ಬಯಲಾಗಿರುವಾಗ, ಆ ಬಯಲನ್ನು ಬುದ್ಧಿ ಪೊರೆಯು ಸುತ್ತಿರುತ್ತದೆ. ಬುದ್ಧಿಪೊರೆ ನಂತರ ಚಿತ್ತದಪೊರೆ ಇದೆ. ಚಿತ್ತದಪೊರೆ ನಂತರ ಅಹಮ್‌ನ ಪೊರೆ ಇದೆ. ಈ ವಿಧವಾಗಿ ಮೂರು ಪೊರೆಗಳ ಮಧ್ಯದಲ್ಲಿ ಬಯಲಾಗಿ ಜೀವಾತ್ಮ ಇದೆ. ಮೂರುಪೊರೆಗಳ ಮಧ್ಯದಲ್ಲಿರುವುದರಿಂದ ಪೊರೆಗಳ ಜೊತೆಗೆ ಜೀವಾತ್ಮ ಆಕಾರ ಏರ್ಪಟ್ಟಿದೆ. ದುಂಡನೆ ಆಕಾರದಿಂದ ಬುದ್ಧಿ, ಚಿತ್ತ, ಅಹಮ್ ಸಮೇತನಾಗಿರುವ ಜೀವಾತ್ಮ ಮೂರು ಗುಣಭಾಗಗಳಲ್ಲಿ




**ಗುಣಚಕ್ರ**

ಯಾವುದರಲ್ಲಿಯೋ ಒಂದರಲ್ಲಿರುತ್ತದೆ. ಜೀವಾತ್ಮವನ್ನು ತನ್ನಲ್ಲಿಟ್ಟುಕೊಂಡ ಮೂರು ಗುಣಗಳು ವೃತ್ತಾಕಾರ ಹೊಂದಿದ ಚಕ್ರದಂತಿವೆ. ಮೂರು ಗುಣಗಳಿಗೆ ಮಧ್ಯ ಆತ್ಮ ಆಧಾರದಂತೆ ಇದೆ. ಆತ್ಮ ಮೂರು ಗುಣಗಳ ಚಕ್ರಕ್ಕಲ್ಲದೆ ಅದರ ಮೇಲಿರುವ ಕರ್ಮಚಕ್ರಕ್ಕೆ ಮತ್ತು ಕರ್ಮಚಕ್ರಕ್ಕೆ ಮೇಲಿರುವ ಕಾಲಚಕ್ರಕ್ಕೆ ಅದಕ್ಕಿಂತ ಮೇಲಿರುವ ಬ್ರಹ್ಮಚಕ್ರಕ್ಕೆ ಆಧಾರವಾಗಿದೆ. ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳ ಚಿತ್ರವನ್ನು ನಂತರ ಪುಟದಲ್ಲಿ ನೋಡಬಹುದು.

ಈ ವಿಧವಾಗಿರುವ ನಾಲ್ಕುಚಕ್ರಗಳ ಸಮೂಹವೂ ಹಣೆಯ ಭಾಗಕ್ಕೆ ಸಮಾನವಾಗಿ ತಲೆ ಮಧ್ಯಭಾಗದಲ್ಲಿ ಇದೆ. ಕೆಳಗಿನ ಚಕ್ರದಲ್ಲಿನ ಜೀವಾತ್ಮ ಅಲ್ಲಿ ಗುಣಗಳಲ್ಲಿ ಸಿಲುಕಿಕೊಂಡಿರುವಾಗ, ಮೇಲಿರುವ ಕರ್ಮಚಕ್ರದಿಂದ ಕರ್ಮ




ಬ್ರಹ್ಮ, ಕಾಲ, ಕರ್ಮ ಗುಣಚಕ್ರಗಳ ಚಿತ್ರ

ಕರ್ಮಕೆಳಗೆ ಪ್ರಸಾರವಾಗುತ್ತಿರುತ್ತದೆ. ಯಾವ ಕರ್ಮ ನಡೆಯಬೇಕೋ ಸೂಚಿಸುತ್ತಿರುತ್ತದೆ. ಈ ವಿಧವಾಗಿ ಕಾಲವನ್ನನುಸರಿಸಿ ಕರ್ಮ, ಕರ್ಮವನ್ನನುಸರಿಸಿ ಗುಣಗಳು, ಗುಣಗಳನ್ನನುಸರಿಸಿ ಕೆಲಸ ನಡೆಯುತ್ತಿರುತ್ತದೆ. ಬ್ರಹ್ಮನಾಡಿಯನ್ನು ಕೇಂದ್ರವಾಗಿ ಮಾಡಿಕೊಂಡು ನಾಲ್ಕು ಚಕ್ರಗಳಿಗೂ ಆಧಾರವಾಗಿರುವ ಆತ್ಮ, ಗುಣಚಕ್ರದಲ್ಲಿನ ಗುಣಗಳು ಶರೀರ ಭಾಗಗಳಾಗಿ ಲೆಕ್ಕಿಸಲ್ಪಡಲಿಲ್ಲ.

ದಾರಿಯಲ್ಲಿ ಅಕ್ಕಿ ಮೂಟೆ ದೊರೆತ ಕಾಲ, ಕಾಲಚಕ್ರವನ್ನನುಸರಿಸಿ ಮಧ್ಯಾಹ್ನ ಹನ್ನೆರಡು ಗಂಟೆಗಳ ಕಾಲ ಅನುಭವಿಸಬೇಕಾದ ಕರ್ಮ, ಕರ್ಮ ಚಕ್ರವನ್ನನುಸರಿಸಿ ಸ್ವಲ್ಪ ಸಂತೋಷ ಅದಕ್ಕಿಂತ ಹೆಚ್ಚಾಗಿ ಬಾಧೆ ಅನುಭವಕ್ಕೆ ಬಂದಿದೆ. ಕೆಲಸಮಾಡಿದ ಗುಣಗಳು ಗುಣಚಕ್ರದಲ್ಲಿನ ಆಸೆ ಜೀವಿಗೆ ಬಂದಿರುವ ಆಗಾಮಿಕಕರ್ಮ ಪಾಪ. ಈ ಕಾರ್ಯದಲ್ಲಿ ಕೆಲಸಮಾಡಿದರೂ ಶರೀರ ಭಾಗಗಳು ಹೊರಗೆ ಕಾಲು, ಕೈಗಳು, ಕಣ್ಣುಗಳು, ಒಳಗಿನ ಮನಸ್ಸು, ಬುದ್ಧಿ, ಚಿತ್ತ, ಅಹಮ್, ಜೀವಾತ್ಮ, ಹೀಗೆ ಅನೇಕ ಸಮಯಗಳಲ್ಲಿ ಅನೇಕವಾದ ಪ್ರಾರಬ್ಧಕರ್ಮ ಶರೀರದ ಮೂಲಕ ಅನುಭವಿಸಲ್ಪಡುತ್ತಿದೆ. ಜೀವಾತ್ಮ ಅನುಭವಿಸುತ್ತಾ ಆಹಮ್‌ನಿಂದ ಮತ್ತೆ ಹೊಸ ಕರ್ಮ ಸಂಪಾದಿಸಿಕೊಳ್ಳುತ್ತಿದ್ದಾನೆ. ಈ ವಿಧಾನ ಎಲ್ಲರಲ್ಲಿಯೂ ನಡೆಯುತ್ತಿದೆ. ಹಳೆಕರ್ಮ ಅನುಭವಿಸುತ್ತಾ ಹೊಸಕರ್ಮ ಸಂಪಾದಿಸಿಕೊಳ್ಳುವು ದರಿಂದ ಜೀವಾತ್ಮ ಮರಣಿಸಿ ಮತ್ತೆ ಹೊಸಜನ್ಮ ಎತ್ತಬೇಕಾಗಿ ಬರುತ್ತಿದೆ. ಜನನ ಮರಣಗಳು ಕರ್ಮದಿಂದಲೇ ತಗಲಿಕೊಳ್ಳುತ್ತಿವೆ ಎಂದು. ಇದು ಜೀವಿತಕಾಲದಲ್ಲಿ ನಡೆಯುವ ತತಂಗ.

ಮರಣದಲ್ಲಿನ ಶರೀರ ಅವಸ್ಥೆ ತಿಳಿಯುವುದಕ್ಕೆ ಜೀವಿತಕಾಲದಲ್ಲಿ ಹೇಗಿರುತ್ತದೋ ತಿಳಿಯುವುದು ಅಗತ್ಯ. ಆದ್ದರಿಂದ ಇಲ್ಲಿಯವರೆಗೂ ಸಜೀವ ಶರೀರದಲ್ಲಿನ ಕಾಲ, ಕರ್ಮ, ಗುಣಗಳು ಕಾರ್ಯಗಳು ತಿಳಿದುಕೊಂಡಿದ್ದೇವೆ. ಜೀವಾತ್ಮ, ಆತ್ಮ, ಅವಯವಗಳ ವಿಷಯವೂ ಸಹ ತಿಳಿದುಕೊಂಡಿದ್ದೇವೆ. ಇನ್ನು ಮರಣಾವಸ್ಥೆ ವಿಷಯ ನೋಡೋಣ. ಬದುಕಿದಷ್ಟುದಿನ ಜೀವಾತ್ಮ ಶರೀರದಲ್ಲಿ ಸುಖವನ್ನೋ, ದುಃಖವನ್ನೋ ಅನುಭವಿಸುತ್ತಲೇ ಇರುತ್ತಾನೆ. ನಿದ್ರೆ ಸಮಯದಲ್ಲಿ ಬಿಟ್ಟರೆ ಎಚ್ಚರಿಕೆಯಲ್ಲಿಯೂ, ಸ್ವಪ್ನದಲ್ಲಿಯೂ ಪ್ರಾರಬ್ಧಕರ್ಮ ಅನುಭವಕ್ಕೆ ಬರುತ್ತಲೇ ಇರುತ್ತದೆ. ಕಾಲಿನಲ್ಲಿ ಮುಳ್ಳು ಚುಚ್ಚುಕೊಂಡರು ಆ ನೋವು ಮನಸ್ಸಿನ ಮೂಲಕ ಬುದ್ಧಿಗೆ ಸೇರಿ ಬುದ್ಧಿಮೂಲಕ ಜೀವಾತ್ಮನ ಅನುಭವಕ್ಕೆ ಬರುತ್ತದೆ. ಪ್ರತಿ ಅನುಭವವನ್ನು ಬಹಳ ವೇಗವಾಗಿ ಜೀವಿಗೆ ಸೇರಿಸುವ ಯಾಂತ್ರಿಕ ವ್ಯವಸ್ಥೆ ಶರೀರದಲ್ಲಿದೆ. ಇಂತಹ ಶರೀರ ಯಂತ್ರಾಂಗ

ಮರಣ ಸಮಯದಲ್ಲಿ ಸ್ಥಂಭಿಸಿಹೋಗುವುದಕ್ಕೆ ಮೊದಲಾಗುತ್ತದೆ. ಆ ಸಮಯವನ್ನೇ 'ಅವಸಾನದಶೆ" ಎನ್ನುತ್ತೇವೆ ಜೀವನದಲ್ಲಿ ಶರೀರಕ್ಕೆ ಐದು ದಶೆಗಳಿವೆ. 1) ಬಾಲ್ಯ, 2) ಯೌವ್ವನ, 3) ಕೌಮಾರ್ಯ, 4) ವೃದ್ಧಾಪ್ಯ, 5) ಅವಸಾನದಶೆ ಎಂದು ಅವುಗಳ ಹೆಸರುಗಳು. ಬಾಲ್ಯದಶೆ, ಯೌವ್ವನದಶೆ, ಕೌಮಾರ್ಯದಶೆ, ವೃದ್ಧಾಪ್ಯದಶೆ ಕೆಲವು ವರ್ಷಗಳ ಕಾಲವಿರುವಾಗ ಅವಸಾನದಶೆ ಮಾತ್ರ ಕೇವಲ ಐದು ನಿಮಿಷಗಳಿಂದ ಅರ್ಧಗಂಟೆಯವರೆಗೂ ಇರುತ್ತದೆ, ಕೆಲವರಿಗೆ ಸ್ವಲ್ಪ ಹೆಚ್ಚು ಕಡಿಮೆಯೂ ಸಹ ಇರುತ್ತದೆ. ಮೊದಲು ಬಾಲ್ಯದಶೆ ಮೊದಲುಗೊಂಡು ವೃದ್ಧಾಪ್ಯದಶೆಯವರೆಗೂ ಶರೀರದ ಒಳಗಿನ ಹೊರಗಿನ ಅವಯವಗಳು, ಕರ್ಮ, ಗುಣಗಳು ಎಲ್ಲಾ ಒಂದೇ ವಿಧವಾಗಿ ಅವುಗಳ ಕೆಲಸ ಅವು ಮಾಡುತ್ತಿರುವಾಗ ಅವಸಾನದಶೆಯಲ್ಲಿ ಮಾತ್ರ ಶರೀರದೊಳಗಿನ, ಹೊರಗಿನ ಅವಯವಗಳಲ್ಲಿ ಬದಲಾವಣೆಗಳು ಉಂಟಾಗುತ್ತಾ ಎಲ್ಲಾ ಕೆಲಸ ಮಾಡದೆ ನಿಂತುಹೋಗುತ್ತವೆ.

ಶರೀರದ ಎಲ್ಲಾ ದಶೆಗಳಲ್ಲಿ ಶರೀರವೆಲ್ಲ ವ್ಯಾಪಿಸಿ ಶಕ್ತಿಯನ್ನು ಕೊಟ್ಟು ಅವಯವಗಳೆಲ್ಲವನ್ನು ಕರ್ಮಾನುಸಾರ ನಡೆಸುವ ಆತ್ಮ ಅವಸಾನ ದಶೆದಲ್ಲಿ ಶರೀರವೆಲ್ಲ ಇಲ್ಲದಂತೆ ಸ್ವಲ್ಪ ಸ್ವಲ್ಪವಾಗಿ ಸಂಕುಚಿತಗೊಳ್ಳುತ್ತದೆ. ಅವಸಾನದಶೆ ಸಮಯದಲ್ಲಿ ಆತ್ಮ ಸಂಕುಚಿತಗೊಳ್ಳುವುದರಿಂದ ಮೊದಲು ಕೂದಲಿನ ಚರ್ಮದ ಸ್ಪರ್ಶ ಇಲ್ಲದಂತೆ ಹೋಗುತ್ತದೆ. ಆ ಸಮಯದಲ್ಲಿ ಇರುವೆ ಕಚ್ಚಿದರೂ ತಿಳಿಯದಂತೆಹೋಗುತ್ತದೆ. ಚೇಳು ಕಚ್ಚಿದರು ನೋವು ತಿಳಿಯದಂತೆಹೋಗುತ್ತದೆ. ಬದುಕಿರುವಷ್ಟು ದಿನ ಎಲ್ಲಾ ದಶೆಗಳಲ್ಲಿಯೂ ಚರ್ಮದ ಮೂಲಕ ತಿಳಿದ ಬಾಧೆಗಳು ಅವಸಾನದಶೆಯಲ್ಲಿ ತಿಳಿಯದಂತೆಹೋಗುತ್ತವೆ. ಇದರ ಪ್ರಕಾರವಾದರೆ ಜೀವಿಗೆ ಎಲ್ಲಾ ದಶೆಗಳಿಗಿಂತ ಅವಸಾನದಶೆಯೇ ಬಾಧೆ ಇಲ್ಲದಿರುವುದೆಂದು ಹೇಳಬಹುದು. ಶರೀರವೆಲ್ಲವೂ ಇರುವ ಆತ್ಮ ಮುದುರಿಕೊಂಡು ಹೋಗುವುದರಿಂದ ಕರ್ಮೇಂದ್ರಿಯಗಳಾದ ಕಾಲು, ಕೈಗಳು, ಕೆಲಸಮಾಡುವ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತವೆ. ಆಗ ಮನುಷ್ಯ ಕದಲದೆ, ಅಲುಗಾಡದೆ

ಮಂಚದ ಮೇಲೆ ಮಾತ್ರ ಇರುತ್ತಾನೆ. ಬಾಯಿ ಕದಲುವ ಶಕ್ತಿಯೂ ಸಹ ಇಲ್ಲದಂತಿರುವುದರಿಂದ ಮನುಷ್ಯ ಮಾತನಾಡುವುದಿಲ್ಲ. ಕೇವಲ ಕರ್ಮೇಂದ್ರಿಯ ಗಳು ಕೆಲಸಮಾಡದೆ, ಕೆಲವು ನಿಮಿಷಗಳು ಜ್ಞಾನೇಂದ್ರಿಯಗಳು ಕೆಲಸ ಮಾಡುತ್ತಿರುವುದರಿಂದ ತನ್ನ ಹತ್ತಿರಕ್ಕೆ ಬಂದಿರುವ ಮನುಷ್ಯರು ಕಾಣಿಸುತ್ತಿರುತ್ತಾರೆ, ಅವರ ಮಾತುಗಳು ಕೇಳಿಸುತ್ತಿರುತ್ತವೆ. ತಾನು ಮಾತ್ರ ಯಾರನ್ನು ಮಾತನಾಡಿಸದ ಸ್ಥಿತಿಯಲ್ಲಿ ಇರುತ್ತಾನೆ. ಬಾಯಿ, ಕಾಲು, ಕೈಗಳು ಕೆಲಸ ಮಾಡದಿರುವುದರಿಂದ ತನ್ನಲ್ಲಿ ತಾನು ವ್ಯಥೆಪಡುತ್ತಿರುತ್ತಾನೆ. ಅಲ್ಲಿಯವರೆಗೂ ಶರೀರದ ಮೇಲಿರುವ ನೋವುಗಳೂ ತಿಳಿಯದಂತೆಹೋಗುತ್ತವೆ. ಕಾಲಿನ ನೋವುಗಳು ಕಾಣಿಸುವುದಿಲ್ಲ. ಶರೀರದೊಳಗೆ ನೋವುಗಳೇನಾದರು ಇದ್ದರೆ ಅವು ಮಾತ್ರ ತಿಳಿಯುತ್ತಿರುತ್ತವೆ. ನಂತರ ಸ್ವಲ್ಪಸಮಯಕ್ಕೆ ಅಲ್ಲಿಯವರೆಗೂ ಕೆಲಸ ಮಾಡುತ್ತಿರುವ ಜ್ಞಾನೇಂದ್ರಿಯಗ ಳಾದ ಕಣ್ಣು, ಕಿವಿಗಳು ಸಹ ಶಕ್ತಿಹೀನವಾಗಿ ಹೋಗುತ್ತವೆ. ಆಗ ಹೊರಗೆ ಯಾರಿರುವುದು, ಯಾರು ಏನು ಮಾತನಾಡು ತ್ತಿರುವುದು ತಿಳಿಯದಂತೆ ಹೋಗುತ್ತದೆ. ಹೊರಗಿನವರು ಇಗೋ ನಿನ್ನ ಚಿಕ್ಕ ಮಗಬಂದಿದ್ದಾನೆಂದು ಹೇಳಿದರೂ, ಬಚ್ಚಿಟ್ಟಿರುವ ಧನವೆಲ್ಲಿಟ್ಟಿದ್ದೀಯಾ ಎಂದು ಕೇಳಿದರು ಒಳಗಿನ ಜೀವಿಗೆ ವಿಷಯವೇ ತಿಳಿಯದಂತೆ ಇರುತ್ತದೆ. ಕಣ್ಣುಗಳು ತೆರೆದುಕೊಂಡಿದ್ದರು ಕಾಣಿಸದಂತೆಹೋಗುವುದರಿಂದ ಕಣ್ಣರೆಪ್ಪೆಯೂ ಸಹ ಒಡೆಯದೆ ನೋಡುತ್ತಿರು ವಂತೆ ಹೊರಗಿನವರಿಗೆ ಕಾಣಿಸುತ್ತಿರುತ್ತದೆ. ಅಂತಹ ಸಮಯದಲ್ಲಿ ಯಮದೂತರು ಬಂದಿದ್ದಾರೆಂದು ಅವರನ್ನು ನೋಡುತ್ತಿದ್ದಾನೆಂದು, ದೂತನ ದರ್ಶನದಿಂದ ನಮ್ಮ ಧ್ಯಾಸ ಹೋಗಿದೆ ಎಂದು ಕೆಲವರಂದುಕೊಳ್ಳುತ್ತಿದ್ದರು. ಅವಸಾನದಶೆ ಯಲ್ಲಿರುವವರಿಗೆ ನೋಟವೆ ಇಲ್ಲವೆಂದು ತಿಳಿಯದೆ ಯಮಕಿಂಕ ರನ್ನು ನೋಡುತ್ತಿದ್ದಾನೆಂದುಕೊಳ್ಳುವುದು ತಪ್ಪು.

ಶರೀರದ ಹೊರಗಿರುವ ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು ಕೆಲಸ ಮಾಡದೆಹೋಗುವುದರಿಂದ ಬಾಹ್ಯಬಾಧೆಗಳೆಲ್ಲ ಬಿಟ್ಟುಹೋದಂತೆ. ಹೊರಗಿನ ಪ್ರಪಂಚದ ಜೊತೆಗೆ ಮನಸ್ಸು ಸಹ ಹೊರಗಿನ ಪ್ರಪಂಚದ ಜೊತೆ

ಸಂಬಂಧ ಇಲ್ಲದಂತಾಗಿ ಒಳಗಿನ ಇಂದ್ರಿಯಗಳು ಕೆಲಸಮಾಡುತ್ತಿರುತ್ತವೆ. ಆತ್ಮದ ಜೊತೆಗೆ ಮನಸ್ಸೂ ಹೊರಗಿನ ಇಂದ್ರಿಯಗಳ ಜೊತೆಗೆ ಸಂಬಂಧ ಇಲ್ಲದಿರುವುದರಿಂದ ಹೊರಗಿನ ವಿಷಯಗಳನ್ನು ಬುದ್ಧಿಗೆ ತಿಳಿಸಲಾರದೆ ಹೋಗುತ್ತದೆ. ಬುದ್ಧಿಗೆ ಹೊರಗಿನ ವಿಷಯಗಳು ಸೇರದಿರುವುದರಿಂದ ಯೋಚಿಸುವ ಅಗತ್ಯವೇ ಇಲ್ಲದಂತೆಹೋಗಿದೆ. ಬುದ್ಧಿಗೆ ಯೋಚನೆಗಳು ಇಲ್ಲದಿರುವುದರಿಂದ ಚಿತ್ತಕ್ಕೆ ಕೆಲಸವೇ ಇಲ್ಲ. ಯಾವ ಕೆಲಸ ನಡೆಯದಿರುವು ದರಿಂದ ಆಹಮ್‌ಗೂ ಕೆಲಸವಿಲ್ಲ. ಆಗ ಮನಸ್ಸಿಗೆ ಆತ್ಮಶಕ್ತಿ ಸಿಗುವುದರಿಂದ ಮನಸ್ಸು ತನ್ನ ನೈಜದ ಪ್ರಕಾರ ನಡೆದುಹೋದ ಕೆಲಸಗಳ ಬಗ್ಗೆ ಜ್ಞಾಪಕ ತರುತ್ತಿರುತ್ತದೆ. ಕ್ರಮೇಣ ಮನಸ್ಸು ಬಲಹೀನವಾಗಿ ಹೋಗುತ್ತಿರುತ್ತದೆ. ಆ ಸಮಯದಲ್ಲಿ ಮನಸ್ಸು ತಿಳಿಸುವ ಸ್ವಲ್ಪಮಟ್ಟಿನ ಜ್ಞಾಪಕ ಬಿಟ್ಟರೆ ಮನುಷ್ಯನಿಗೆ ಯಾವ ದುಃಖವಾಗಲಿ, ಯಾವ ಚಿಂತೆಯಾಗಲಿ ಇಲ್ಲದಂತಿರುತ್ತದೆ. ಎಷ್ಟೋ ಶರೀರ ಬಾಧೆಗಳು, ಮಾನಸಿಕ ಬಾಧೆಗಳು ಹೊಂದಿ ಶಾಂತಿಯಿಲ್ಲದವನಿಗೆ ಜೀವನದಲ್ಲಿ ಯಾವಾಗಲೂ ಅನುಭವಿಸದ ಬಾಧೆರಹಿತ ಸ್ಥಿತಿಯನ್ನು ಅವಸಾನದಶೆಯಲ್ಲಿ ಜೀವಿಯು ಪಡೆಯುತ್ತಿರುತ್ತಾನೆ. ಯಾವ ಬಾಧೆಗಳು, ಯಾವ ಚಿಂತೆಗಳು ಇಲ್ಲದ ಸ್ಥಿತಿಯನ್ನು ಕುರಿತು ಬದುಕಿರುವವರು ತಿಳಿಯಲಾರದೆ, ಮರಣಿಸುವಾಗ ಜೀವಿಯು ಎಷ್ಟು ಬಾಧೆ ಅನುಭವಿಸುತ್ತಿದ್ದಾನೋ ಎಂದುಕೊಳ್ಳುತ್ತಾರೆ. ಕೊನೆಗೆ ಮನಸ್ಸು ಸಹ ಶಕ್ತಿಹೀನವಾಗುತ್ತಾ ಚಿಕ್ಕ ಚಿಕ್ಕ ವಿಷಯಗಳನ್ನು ಮರೆತು ಹೋಗುತ್ತಾನೆ. ತನಗಿರುವ ಜ್ಞಾಪಕಶಕ್ತಿ ಕಡಿಮೆಯಾಗುವು ದರಿಂದ ಬಹಳ ಮುಖ್ಯವಾದ ವಿಷಯುಗಳನ್ನು, ಚೆನ್ನಾಗಿ ಮನಸ್ಸಿಗೆ ಅಚ್ಚಿಕೊಂಡಿರುವ ವಿಷಯಗಳನ್ನು ಜ್ಞಾಪಕ ತರುತ್ತಿರುತ್ತದೆ. ಆ ವಿಷಯಗಳನ್ನೇ ಬುದ್ಧಿ ಗ್ರಹಿಸಿ ಜೀವಿಗೆ ತಿಳಿಸುತ್ತಿರುತ್ತದೆ. ಮನಸ್ಸು ಕೊನೆಯವರೆಗು ಜ್ಞಾಪಕಗಳ ಕೆಲಸವೇ ಮಾಡುತ್ತಿರುತ್ತದೆ. ಕೊನೆಗೆ ಮನಸ್ಸು ಎಲ್ಲಾ ವಿಷಯಗಳನ್ನು ಮರೆತುಹೋಗಿ ಕೊನೆಗೆ ತನಗಿರುವ ಇಷ್ಟವಾದ ವಿಷಯವೇನೋ ಅದೊಂದನ್ನು ಜ್ಞಾಪಕ ತರುತ್ತದೆ. ಅದುವೆ ಮನಸ್ಸಿಗೆ ಕೊನೆಯ ಜ್ಞಾಪಕ. ಅದಕ್ಕಿಂತ ಮೀರಿದ ವಿಷಯ ಮನಸ್ಸಿಗಿರುವುದಿಲ್ಲ. ಆ ಕೊನೆಯ ವಿಷಯವೇ ಬುದ್ಧಿ ಮೂಲಕ

ಜೀವಿಯು ಗ್ರಹಿಸುತ್ತಿರುತ್ತಾನೆ. ಜೀವನದಲ್ಲಿ ಏನನ್ನಾದರೆ ಮನುಷ್ಯ ದೊಡ್ಡದಾಗಿ ತಿಳಿದಿರುತ್ತಾನೋ, ಯಾವ ವಿಷಯವಾದರೆ ಮನುಷ್ಯನಿಗೆ ಪ್ರಾಮುಖ್ಯ ವಾಗಿರುತ್ತದೋ, ಯಾವ ವಿಷಯವನ್ನು ಜೀವನದ ಧ್ಯೇಯವಾಗಿ, ಜೀವನದ ಸಾರಾಂಶವಾಗಿ ಇಟ್ಟುಕೊಂಡು ಬದುಕುತ್ತಿರುತ್ತಾನೋ ಆ ವಿಷಯವೇ ಕಟ್ಟಕಡೆಯ ಜ್ಞಾಪಕವಾಗುತ್ತದೆ. ಕೊನೆಯ ವಿಷಯವನ್ನು ಮನೋಕನ್ನಡಿಯ ಮೇಲೆ ಬುದ್ಧಿ ಮೂಲಕ ಜೀವಾತ್ಮ ನೋಡುತ್ತಿರುವಾಗ, ಆತ್ಮ ತನ್ನ ಶಕ್ತಿಯನ್ನು ಬುದ್ಧಿ, ಮನಸ್ಸಿನಿಂದಲೂ ಸಹ ಸಂಕುಚಿತಗೊಳ್ಳುವಂತೆ ಮಾಡುವುದರಿಂದ ಎಲ್ಲಾ ಅವಯವಗಳು ಸ್ಥಂಭಿಸಿಹೋದಂತೆ ಅವು ಸಹ ಇಲ್ಲದಂತೆಹೋಗುತ್ತವೆ. ಶರೀರದಲ್ಲಿ ಅಲ್ಲಿಯವರೆಗೂ ಎಲ್ಲಾದಶೆಗಳಲ್ಲಿ ಕೆಲಸಮಾಡಿದ 24 ಭಾಗಗಳು ಅಂತ್ಯವಾಗಿಹೋಗುತ್ತವೆ. ಕೊನೆಗೆ ಶರೀರ ಭಾಗವಾಗಿ ಹೆಸರುವಾಸಿಯಾದ ಜೀವನೊಬ್ಬನೇ ಉಳಿಯುತ್ತಾನೆ. ಆತ್ಮ ಶರೀರವೆಲ್ಲವೂ ಮುದುಡಿಕೊಂಡು ತನ್ನ ನಿವಾಸಕೇಂದ್ರವಾದ ಬ್ರಹ್ಮನಾಡಿಯನ್ನು ಸೇರುತ್ತದೆ. ಆಗ ಶರೀರವೆಲ್ಲ ಮೃತವಾಗಿಹೋಗಿ ತಲೆ ಮಧ್ಯದಲ್ಲಿ ಬ್ರಹ್ಮನಾಡಿಯಲ್ಲಿ ಆತ್ಮವು, ಗುಣಚಕ್ರದಲ್ಲಿ ಜೀವಿಯು ಇರುತ್ತಾರೆ. ಆ ಸ್ಥಿತಿ ಕೆಲವು ಸೆಕೆಂಡ್‌ಗಳು ಮಾತ್ರವಿದ್ದು ಆತ್ಮ ಬ್ರಹ್ಮನಾಡಿಯನ್ನು ಸಹ ಬಿಟ್ಟು ತನ್ನಜೊತೆ ಇರುವ ನಾಲ್ಕುಚಕ್ರಗಳನ್ನು ತೆಗೆದುಕೊಂಡು ಶರೀರವನ್ನು ಬಿಟ್ಟುಹೋಗುತ್ತಾನೆ. ಅಲ್ಲಿಗೆ ಪೂರ್ತಿ ಮರಣ ಸಂಭವಿಸಿದಂತಾಗುತ್ತದೆ. ಅವಸಾನದಶೆಯಲ್ಲಿ ಮುದುಡಿಕೊಳ್ಳುತ್ತಾ ಶರೀರ ಭಾಗಗಳನ್ನು ಬಿಡಿಸಿಕೊಂಡ ಆತ್ಮ ಕೊನೆಗೆ ತನ್ನಜೊತೆ ಜೀವಿಯನ್ನು, ಅವನ ಸುತ್ತಾ ಇರುವ ಗುಣಗಳನ್ನು ಅಂದರೆ ಗುಣಚಕ್ರವನ್ನು, ಅದಕ್ಕೆ ಮೇಲಿರುವ ಕರ್ಮಚಕ್ರವನ್ನು ಉಳಿದ ಎರಡು ಚಕ್ರಗಳನ್ನು ತೆಗೆದುಕೊಂಡು ಮತ್ತೊಂದು ಶರೀರಕ್ಕೆ ಹೋಗುತ್ತದೆ. ಈ ವಿಷಯವನ್ನೇ ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ ಎಂಟನೆಯ ಶ್ಲೋಕದಲ್ಲಿ **"ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ, ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶ ಯತ್"** ಆತ್ಮ ಯಾವ ಶರೀರದಿಂದ ಹೊರಟು, ಮತ್ತೆ ಯಾವ ಶರೀರದಲ್ಲಿ ತಾನು ಪ್ರವೇಶಿಸುತ್ತಿದೆಯೋ ಅಲ್ಲಿಗೆ ತನ್ನ ಜೊತೆಗೆ ಕಾಮಾದಿ ಗುಣಗಳನ್ನು,

ಕರ್ಮವನ್ನು, ಜೀವಿಯನ್ನು, ಗಾಳಿ ವಾಸನೆಯನ್ನು ತೆಗೆದುಕೊಂಡು ಹೋದಂತೆ ತೆಗೆದುಕೊಂಡು ಹೋಗುತ್ತದೆ.

ಮರಣಿಸಿದ ಶರೀರದಿಂದ ಆತ್ಮ ನಾಲ್ಕುಚಕ್ರಗಳಿಂದ ಸಹ ಹೊರಡುತ್ತಿದೆ. ಆತ್ಮ ನಾಲ್ಕುಚಕ್ರಗಳಿಗೆ ಆಧಾರವಾಗಿರುವುದರಿಂದ ಆತ್ಮ ಎಲ್ಲಿಗೆ ಹೋದರು ಅದನ್ನು ಕಚ್ಚಿಕೊಂಡಿರುವ ನಾಲ್ಕುಚಕ್ರಗಳು ಹೋಗುತ್ತಿರುತ್ತವೆ. ಮನುಷ್ಯರಿಗೊಬ್ಬರಿಗೇ ಅಲ್ಲದೆ ಪ್ರತಿ ಜೀವರಾಶಿಗೂ ಈ ನಾಲ್ಕು ಚಕ್ರಗಳ ಜೋಡಣೆ ಇರುತ್ತದೆ. ಯಾವ ಜೀವರಾಶಿ ಶರೀರ ಮರಣಹೊಂದಿದರು, ಅದರಲ್ಲಿನ ಆತ್ಮ ನಾಲ್ಕುಚಕ್ರಗಳಿಂದ ಸಹ ಹೊರಟು ಕಣ್ಣಿಗೆ ಕಾಣಿಸದಂತೆ ಹೋಗುತ್ತಿದೆ. ಗಾಳಿಯಲ್ಲಿ ಸುವಾಸನೆ ಕಾಣಿಸಿದಂತೆ ಮತ್ತೊಂದು ಕಡೆಗೆ ಪ್ರಯಾಣ ಮಾಡಿದಂತೆ ಆತ್ಮವೂ ಸೂಕ್ಷ್ಮವಾಗಿ ಹೋಗುತ್ತಿದೆ. ಆತ್ಮ, ಜೀವಾತ್ಮ, ಗುಣಗಳು, ಕರ್ಮ ಯಾವುವು ಕಾಣಿಸುವವಲ್ಲ. ಆದ್ದರಿಂದ ನಮ್ಮ ಮುಂದೆಯೇ ಅವು ಮರಣಿಸಿದವನ ಶರೀರದಿಂದ ಹೋದರೂ ಅವುಗಳನ್ನು ನಾವು ಗುರುತಿಸುವುದಿಲ್ಲ. ಆತ್ಮವನ್ನು ಆಧಾರ ಮಾಡಿಕೊಂಡು ನಾಲ್ಕುಚಕ್ರಗಳು ಆತ್ಮದ ಜೊತೆಗೆ ಹೋಗುವುದರಿಂದ ಕೆಳಗಿನಚಕ್ರದಲ್ಲಿರುವ ಗುಣಗಳಿಂದಲೂ ಸಹ ಜೀವಾತ್ಮವು ಹೋಗಬೇಕಾಗಿದೆ. ಆತ್ಮ ಜೀವಾತ್ಮ ಎರಡು ಜೋಡಿ ಆತ್ಮಗಳು. ಆದ್ದರಿಂದ ಒಂದು ಹೋದರೆ ಮತ್ತೊಂದು ಸಹ ಹೋಗಬೇಕಾಗಿದ್ದೇ.

ಪೂರ್ವಕಾಲದಿಂದ ಮನುಷ್ಯರಿಗೆ ಮರಣಕಾಲದಲ್ಲಿ ತಿಳಿಯದ ರಹಸ್ಯ ಏನೆಂದರೆ! ಆತ್ಮ ನಾಲ್ಕುಚಕ್ರಗಳಿಂದ ಹೊರಗೆ ಹೋಗುತ್ತಿದೆ ಎಂಬ ವಿಷಯ ಇಲ್ಲಿಯವರೆಗೂ ಯಾರಿಗೂ ತಿಳಿದಿಲ್ಲ. ಯಾವ ಗುರುಗಳು ಹೇಳಲಿಲ್ಲ, ಯಾವ ಪುಸ್ತಕಗಳಲ್ಲಿ ಬರೆಯಲಿಲ್ಲ. ಯಾವ ಯುಗದಲ್ಲಿಯೂ ಸಹ ನಾಲ್ಕುಚಕ್ರಗಳ ವಿವರವು ಯಾರು ಹೇಳದೆ ಇರುವುದರಿಂದ, ಈ ವಿಷಯ ಹೊಸದಾಗಿ ಇರುವುದರಿಂದ ಜಾಗ್ರತೆಯಾಗಿ ಅರ್ಥಮಾಡಿಕೊಳ್ಳಬೇಕು. ನಿನಗೆ, ನನಗೆ ಎಂಬ ಬೇಧವಿಲ್ಲದಂತೆ ಪ್ರತಿ ಜೀವರಾಶಿ ಶರೀರದಲ್ಲಿಯೂ ತಲೆಯಲ್ಲಿ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳು ಇವೆ. ಸೂಕ್ಷ್ಮರೂಪವಾಗಿ ಜ್ಞಾನದೃಷ್ಟಿಗೆ

ಗೋಚರಿಸುವ ಇವುಗಳನ್ನು ಜ್ಞಾನದಿಂದಲೇ ತಿಳಿಯಬೇಕು. ಆಧ್ಯಾತ್ಮಿಕ ವಿದ್ಯೆಯಲ್ಲಿಯೇ ಅತಿ ರಹಸ್ಯವಾದ ನಾಲ್ಕುಚಕ್ರಗಳನ್ನು ಅರ್ಥ ಮಾಡಿಕೊಂಡರೆ ಜನನ ಮರಣ ರಹಸ್ಯ ಸುಲಭವಾಗಿ ತಿಳಿಯುತ್ತದೆ. ಓದುಗರಿಗೆ ಸ್ವಲ್ಪ ಅರ್ಥವಾಗುವುದಕ್ಕೆ ಸೂಕ್ಷ್ಮವಾಗಿರುವ ನಾಲ್ಕುಚಕ್ರಗಳನ್ನು, ಗುಣಚಕ್ರವನ್ನು, ಅದರಲ್ಲಿನ ಜೀವಾತ್ಮವನ್ನು ಹಿಂದಿನ ಪುಟದಲ್ಲಿ ಚಿತ್ರರೂಪವಾಗಿ ತೋರಿಸಿದ್ದೇವೆ. ಈಗ ಕರ್ಮಚಕ್ರ ಕಾಲಚಕ್ರವನ್ನು ನಂತರ ಪುಟಗಳಲ್ಲಿ ನೋಡಬಹುದು.




**ಕಾಲಚಕ್ರ**

ನಾಲ್ಕುಚಕ್ರಗಳಲ್ಲಿನ ಕಾಲ, ಕರ್ಮ, ಗುಣಚಕ್ರಗಳ ವಿಷಯವು ಸ್ವಲ್ಪ ಅರ್ಥವಾಗಿರುತ್ತದೆ. ಎಲ್ಲದಕ್ಕಿಂತ ಮೇಲಿರುವ ಬ್ರಹ್ಮಚಕ್ರವು ವಿಶ್ವದ ಆಯುಸ್ಸಿಗೆ ಸಂಬಂಧಿಸಿರುವುದು ಆದ್ದರಿಂದ ಅದರ ವಿಷಯ ಈಗ ನಮಗೆ ಅನವಶ್ಯ ಹೂವಿನಲ್ಲಿನ ವಾಸನೆ ಕಾಣಿಸದಂತೆ, ವಾಸನೆ ಗಾಳಿಯಲ್ಲಿ ಬೆರೆತು ಮತ್ತೊಂದು ಕಡೆಗೆ ಹೋದಂತೆ ಮರಣದಲ್ಲಿ ನಾಲ್ಕುಚಕ್ರಗಳ ಜೋಡಣೆ ಕ್ಷಣದಲ್ಲಿಯೇ ಮತ್ತೊಂದು ಶರೀರವನ್ನು ಸೇರುತ್ತದೆ. ವಾಸ್ತವವಾಗಿ ಹೇಳಬೇಕೆಂದರೆ ಒಂದು ಅಥವಾ ಎರಡು ಸೆಕೆಂಡುಗಳಲ್ಲಿ ಮತ್ತೊಂದು ಶರೀರವನ್ನು ಸೇರುತ್ತಿದೆ ಎಂದು

ಹೇಳಬಹುದು. ಇನ್ನು ಇನ್ನೂ ವಿವರವಾಗಿ ನೋಡಿದರೆ ಮರಣಿಸುವವನ ಶರೀರದಲ್ಲಿ ಆಡುವ ಶ್ವಾಸ ಮೇಲೆ ಕೆಳಗೆ ಆಡುತ್ತಿರುತ್ತದೆ! ಅವಸಾನದಶೆಯಲ್ಲಿ ಮೂಗಿನ ರಂಧ್ರಗಳಲ್ಲಿ ಮೇಲಕ್ಕೆಹೋಗಿ ಕೆಳಗೆ ಬರುತ್ತಿರುವ ಶ್ವಾಸ ಮರಣದಿಂದ ಕೊನೆಯದಾಗಿ ಕೆಳಗೆ ಬಂದು ನಂತರ ಮೂಗಿನ ರಂಧ್ರಗಳಲ್ಲಿ ತೂರುವುದಿಲ್ಲ. ಕೆಳಗೆ ಬಂದು ಶ್ವಾಸ ಮತ್ತೆ ಮೂಗಿನ ರಂಧ್ರಗಳಲ್ಲಿ ತೂರಿ ಮೇಲಕ್ಕೆ ಹೋಗುವುದು ಅದರ ಸಹಜವಾದ ಕೆಲಸ ಆದರೂ ಹಾಗೆ ಮರಣಿಸಿದ ಶರೀರದಲ್ಲಿ ತೂರದೆ ತಕ್ಷಣ ಆತ್ಮ ಪ್ರವೇಶಿಸಿದ ಸ್ಥಳದಲ್ಲಿ ಶ್ವಾಸ ಶರೀರ ದೊಳಗೆ ಪ್ರವೇಶಿಸುತ್ತದೆ. ಇಲ್ಲಿ ಕೆಳಗೆ ಬಂದಿರುವುದು ಇಲ್ಲಿಯೇ ಮೇಲಕ್ಕೆ ಹೋಗದೆ, ಇಲ್ಲಿ ಹೋದಂತೆ ಸ್ವಲ್ಪವೂ ಆಲಸ್ಯ ಮಾಡದೆ ಅಲ್ಲಿ ಬೇರೆ ಶರೀರದೊಳಗೆ ಹೋಗಿದೆ. ಇದರಿಂದ ಶ್ವಾಸ ಕೆಳಗೂ ಮೇಲಕ್ಕೂ ಆಡುತ್ತಲೇ ಇದೆ. ಮರಣದಿಂದ ಹಳೆ ಜಾಗದಲ್ಲಿ ಮೇಲಕ್ಕೆ ಹೋಗದೆ ಹೊಸ ಜಾಗದಲ್ಲಿ ಮೇಲಕ್ಕೆ ಹೋಗಿದೆ. ಮರಣಿಸಿದ ಶರೀರದಿಂದ, ಹೊಸದಾಗಿ ಹುಟ್ಟಿದ ಶರೀರ ಸಾವಿರಾರು ಮೈಲಿಗಳ ದೂರದಲ್ಲಿ ಇದ್ದರೂ ತತ್‌ಕ್ಷಣವೇ ಆತ್ಮ ಅಲ್ಲಿಗೆ ಸೇರುತ್ತಿದೆ. ಮರಣಿಸಿದ ಜೀವಿಯು ತಕ್ಷಣ ಬೇರೊಂದು ಶರೀರದಲ್ಲಿ ಪ್ರವೇಶಿಸುವುದರಿಂದ ಯಮಧರ್ಮರಾಜು ಯಮಲೋಕ ಎನ್ನುವ ಪ್ರಸಕ್ತಿಯೇ ಇಲ್ಲ. ಹಾಗಾದರೆ ಯಮಧರ್ಮರಾಜನ ಉದ್ಯೋಗವೇನಾಗಬೇಕೆಂದು ಕೆಲವರು ಕೇಳಬಹುದು. ನೀವು ಊಹಿಸಿಕೊಂಡ ಯಮಲೋಕವಾಗಲಿ, ಯಮಧರ್ಮರಾಜಾಗಲಿ ಕೇವಲ ಕಲ್ಪನೆ. ನಾವು ಮಾಡಿಕೊಂಡ ಪಾಪಪುಣ್ಯಗಳೆಲ್ಲವೂ ಜನ್ಮಗಳಲ್ಲಿ ಭೂಮಿ ಮೇಲೆಯೇ ಅನುಭವಿಸಬೇಕು. ಪುಣ್ಯ ಮಾಡಿದವನಿಗೆ ಸ್ವರ್ಗ ಇಲ್ಲಿಯೇ ಇದೆ, ಪಾಪ ಮಾಡಿದವನಿಗೆ ನರಕ ಇಲ್ಲಿಯೇ ಇದೆಯೆಂದು ತಿಳಿಯಬೇಕು.

ಎಷ್ಟುದೂರವಾದರು ಒಂದು ಅಥವಾ ಎರಡು ಸೆಕೆಂಡ್‌ಗಳ ಕಾಲದಲ್ಲಿ ಹೋಗುವ ಆತ್ಮ ಜೀವಾತ್ಮಗಳಿಗೆ ತಾವು ಧರಿಸುವ ಶರೀರವು ಇಂತಹ ಪ್ರದೇಶದಲ್ಲಿ ಇದೆಯೆಂದು ಮುಂಚೆಯೇ ತಿಳಿದಿರುತ್ತದೆಯಾ? ಎನ್ನುವ ಪ್ರಶ್ನೆಯೂ ಸಹ ಕೆಲವರಿಗೆ ಬರಬಹುದು. ಅದಕ್ಕೆ ಉತ್ತರ ನೋಡಿದರೆ, ಮರಣಕ್ಕೂ ಮುಂಚೆ




**ಕರ್ಮಚಕ್ರ**

ಅವಸಾನದಶೆಯಲ್ಲಿ ಮನಸ್ಸಿಗೆ ಕೊನೆಯ ಜ್ಞಾಪಕ ಏನಾದರೆ ಬಂದಿರುತ್ತದೋ ಅದಕ್ಕೆ ಸಂಬಂಧಿಸಿದ ಜನ್ಮ ಉಂಟಾಗುತ್ತದೆಂದು ಭಗವದ್ಗೀತೆಯಲ್ಲಿ ಹೇಳಲಾಗಿದೆ. ಕೊನೆಯ ಜ್ಞಾಪಕಗಳನ್ನು ಮೊದಲು ಎರಡು ವಿಧಗಳಾಗಿ ವಿಭಜಿಸಬಹುದು. ಪರಮಾತ್ಮನಿಗೆ ಸಂಬಂಧಿಸಿದ ಜ್ಞಾಪಕಗಳೆಲ್ಲ ಒಂದು ವಿಧ, ಪ್ರಪಂಚಕ್ಕೆ ಸಂಬಂದಿಸಿದವೆಲ್ಲವೂ ಎರಡನೇ ವಿಧವಾಗಿ ಹೇಳಬಹುದು. ಕೊನೆಯ ಜ್ಞಾಪಕ ಯಾವ ಗುಂಪಿಗೆ ಸೇರಿರುವುದೋ, ಅದರಲ್ಲಿಯೇ ಅದು ಯಾವ ಸ್ಥಾಯಿಗೆ

ಸೇರಿರುವುದೋ ಅದರ ಪ್ರಕಾರ ಬರುವ ಜನ್ಮ ಇರುತ್ತದೆ. ಇದನ್ನು ಕುರಿತು ಭಗವದ್ಗೀತೆ ಅಕ್ಷರ ಪರಬ್ರಹ್ಮಯೋಗದಲ್ಲಿ **"ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇ ಬರಮ್! ತಂ ತಮೇವೈತಿ ಕೌಂತೇಯ!"** ಎಂದಿದ್ದಾನೆ. ಇದರ ಪ್ರಕಾರ ಕೊನೆಯಲ್ಲಿ ಯಾವ ಯಾವ ಭಾವ ಇರುತ್ತದೋ ಅದಕ್ಕೆ ಸಂಬಂಧಿಸಿದ ಜನ್ಮವೇ ಲಭ್ಯವಾಗುತ್ತದೆ. ಕೊನೆಯಲ್ಲಿ ಪ್ರಪಂಚ ಸಂಬಂಧ ಜ್ಞಾಪಕ ಬಂದಿದ್ದರೆ ಆ ಭಾವಕ್ಕೆ ಸೇರಿ ಹೋಗುವ ಜನ್ಮ ಯಾವ ಸ್ಥಳದಲ್ಲಿ, ಯಾವ ಮನೆಯಲ್ಲಿ ಉಂಟಾಗುತ್ತಿರುತ್ತದೋ ಆ ಮನೆಯಲ್ಲಿ ಜನ್ಮಿಸಿದ ಶಿಶುವನ್ನು ಆತ್ಮ ಸೇರುತ್ತದೆ. ಶರೀರವನ್ನು ಬಿಟ್ಟ ತಕ್ಷಣ ಮನೋಭಾವಕ್ಕೆ ತಕ್ಕಾದ ಶರೀರವೆಲ್ಲಿ ಜನ್ಮಿಸಿರುತ್ತದೋ ಅಲ್ಲಿಗೆ ಆತ್ಮ ನೇರವಾಗಿ ಹೋಗುತ್ತದೆ. ಜೀವಿಯ ಪ್ರಾರಬ್ಧಕರ್ಮ ಯಾವ ಶರೀರದಲ್ಲಿ ಪ್ರವೇಶಿಸುತ್ತದೋ ಆ ಶರೀರದೊಳಗೆ ಆತ್ಮ ಪ್ರವೇಶಿಸುವುದಕ್ಕೆ ತಕ್ಕಾದ ಕಾರಣವಿದೆ. ಅನುಭವಿಸಬೇಕಾದ ಕರ್ಮದ ಪ್ರಕಾರ, ತಿಳಿಯಬೇಕಾದ ಜ್ಞಾನವನ್ನು ಹಿಡಿದು ಸೇರಬೇಕಾದ ಜೀವಿಯನ್ನು ಹಿಡಿದು ಶಿಶು ಶರೀರದಲ್ಲಿನ ಮೆದುಳಿನಲ್ಲಿ ಜೋಡಣೆಗಳು ಇರುತ್ತವೆ. ಮರಣಿಸಿದವನ ಕೊನೆಯ ಜ್ಞಾಪಕಕ್ಕೆ ಹೊಸ ಶರೀರದಲ್ಲಿನ ಜೋಡಣೆಗಳು ಸರಿಹೋಗುವ ಶರೀರವೇ ಆತ್ಮಕ್ಕೆ ಗೋಚರವಾಗುತ್ತದೆ. ಅದುವೇ ಗಮ್ಯವಾಗುತ್ತದೆ. ನೀರು ಇಳಿಜಾರಿಗೆ ಹೋಗುವಂತೆ ಆತ್ಮ, ಮನಸ್ಸು ಕೊನೆಯ ಜ್ಞಾಪಕಕ್ಕೆ ಸರಿಹೋಗುವ ಶರೀರವನ್ನೇ ಸೇರುತ್ತದೆ. ಆಮೆ ಸಮುದ್ರದ ಹೊರಗೆ ಬಂದು ಮರಳಿನ ಕುಣಿಯಲ್ಲಿ ಮೊಟ್ಟೆಗಳು ಇಟ್ಟುಹೋಗುತ್ತದೆ. ಕೆಲವು ದಿನಗಳಿಗೆ ಮರಳಿನಲ್ಲಿನ ಮೊಟ್ಟೆಗಳು ಮರಿಗಳಾಗಿ ಬದಲಾಗಿ ಮರಳಿನಿಂದ ಹೊರಗೆ ಬಂದು ಸಮುದ್ರದ ಕಡೆಯೇ ಹೋಗುತ್ತವೆ. ಸಮುದ್ರ ಎಲ್ಲಿರುವುದು ಕಾಣಿಸದಿದ್ದರು ಆ ಕಡೆಗೆ ಪ್ರಯಾಣಸಾಗಿಸುತ್ತವೆ. ಒಂದುವೇಳೆ ದಾರಿ ಮರಳಿಸಿದರು ಅದು ಮಾತ್ರ ಆಕಡೆಯೇ ಹೋಗುತ್ತದೆ. ಸಮುದ್ರವನ್ನು ತಿಳಿಯದಂತೆ, ದಾರಿ ಇಲ್ಲದಂತೆ ಒಂದು ದೊಡ್ಡ ಗೋಡೆಯನ್ನು ಪರ್ಲಾಂಗದೂರ ಕಟ್ಟಿದರು, ಆಮೆಯ ಮರಿ ಪಕ್ಕದದಾರಿಗೆ ಹೋಗದೆ ಗೋಡೆಯ ಉದ್ದಕ್ಕೂ ಬಂದು ಮತ್ತೆ ಸಮುದ್ರದ ಕಡೆಗೆ ಹೋಗುತ್ತದೆ. ಹಾಗೆಯೇ ಒಂದು ಪಾರಿವಾಳ ಸಾವಿರಮೈಲಿ ದೂರದಲ್ಲಿ ಬಿಟ್ಟರೂ ತನ್ನ ಊರು ಯಾವಕಡೆ

ಇದೆಯೋ ಆಕಡೆಯಲ್ಲಿಯೇ ಪ್ರಯಾಣ ಮಾಡುತ್ತದೆ. ಆಗಲೇ ಹುಟ್ಟಿದ ಆಮೆಯ ಮರಿ ಎಷ್ಟು ಅಡತಡೆಗಳಿದ್ದಲ್ಲಿಯೂ ಸಮುದ್ರದ ದಿಕ್ಕನ್ನು ಸುಲಭವಾಗಿ ಗುರುತಿಸುತ್ತದೆ. ಹಾಗೆ ದಾರಿ, ದಿಶ ತಿಳಿಯದ ಪಾರಿವಾಳ ತನ್ನ ಊರಿನ ದಿಕ್ಕನ್ನು ಸುಲಭವಾಗಿ ಗುರುತಿಸುತ್ತದೆ. ಹಾಗೆ ಗುರುತಿಸುವ ಶಕ್ತಿ ಅವುಗಳ ಶರೀರದಲ್ಲಿನ ಆತ್ಮಗಳಿಗೆ ಇದೆ. ಹಾಗೆ ಪ್ರಾರಬ್ಧಕರ್ಮಕ್ಕೆ ತಕ್ಕಾದ ಶರೀರವನ್ನು ಮತ್ತು ಕೊನೆಯ ಯೋಚನೆಗೆ ತಕ್ಕಾದ ಮಡತೆಗಳಿರುವ ಮೆದುಳಿರುವ ಶರೀರವನ್ನು ಆತ್ಮ ಗುರುತಿಸುತ್ತದೆ.

ಮನುಷ್ಯ ಸಂಪಾದಿಸಿಕೊಂಡ ಆಗಾಮಿಕಕರ್ಮ, ಸಂಚಿತಕರ್ಮದಲ್ಲಿ ಬೆರೆತುಹೋಗಿರುತ್ತದೆ! ಮನುಷ್ಯ ಮರಣಿಸಿದಾಗ ಸಂಚಿತಕರ್ಮದೊಳಗಿನದು ಪ್ರಾರಬ್ಧವಾಗಿ ಹೇಗೆ ಬದಲಾಗುತ್ತಿದೆ? ಎಂದು ಕೆಲವರು ಕೇಳಬಹುದು. ಅದಕ್ಕೆ ಸಮಾಧಾನ ಮರಣ ಸಮಯದಲ್ಲಿ ಶರೀರವೆಲ್ಲ ಶಕ್ತಿ ಕಳೆದುಕೊಂಡು ಎಲ್ಲಾ ಅವಯವಗಳು ಕೆಲಸಮಾಡದ ಸ್ಥಿತಿಯಲ್ಲಿ ಆತ್ಮ ಉಸಿರಾಟದ ಚೀಲದ ಮೂಲಕ ಸ್ವಲ್ಪ ಮಟ್ಟಿನ ಶ್ವಾಸ ಆಡಿಸುತ್ತಾ ಕೊನೆಗೆ ಮನಸ್ಸೊಂದರ ಕೆಲಸವನ್ನು ಸಹ ನಿಂತುಹೋಗುವಂತೆ ಮಾಡುತ್ತದೆ. ಆ ಸಮಯದಲ್ಲಿ ಕೊನೆಗೆ ತನಗೆ ಸಿಕ್ಕಿರುವುದನ್ನು ಮಾತ್ರ ಜೀವಾತ್ಮ ನೋಡುತ್ತಿರುತ್ತಾನೆ. ಶ್ವಾಸ ಮಾತ್ರ ಹೊರತು ಉಳಿದ ಮನಸ್ಸು ಸಹ ನಿಂತುಹೋದ ನಂತರ ಆತ್ಮ ಬ್ರಹ್ಮನಾಡಿಯಲ್ಲಿ ಸೇರಿ ನಾಲ್ಕುಚಕ್ರಗಳಿಂದ ಸಹ ಒಂದು ಕ್ಷಣ ಇರುತ್ತದೆಂದು ಮುಂಚೆಯೆ ಹೇಳಿಕೊಂಡಿದ್ದೇವೆ. ಆ ಕ್ಷಣದಲ್ಲಿನ ಕೊನೆಯ ಮನೋದೃಶ್ಯವನ್ನು ಹಿಡಿದು ಸಂಚಿತದಿಂದ ಪ್ರಾರಬ್ಧವನ್ನು ಆತ್ಮದಿಂದಲೇ ಆರಿಸಿಕೊಳ್ಳಲಾಗುತ್ತದೆ. ಜೀವಿಗೆ ಕೊನೆಯ ದೃಶ್ಯ ತಿಳಿಯದವರೆಗೂ ಪ್ರಾರಬ್ಧ ನಿರ್ಣಯವಾಗುವುದಿಲ್ಲ. ಕೊನೆಯ ದೃಶ್ಯದಿಂದ ಪ್ರಾರಬ್ಧ, ಪ್ರಾರಬ್ಧವನ್ನು ಹಿಡಿದು ಎರಡನೇ ಜನ್ಮದ ಶರೀರವನ್ನು ನಿರ್ಣಯಿಸಲ್ಪಡುತ್ತದೆ. ಯಾವ ಶರೀರವನ್ನು ಪಡೆಯಬೇಕಾಗಿರುವುದು ಪ್ರಾರಬ್ಧ ನಿರ್ಣಯಿಸಿದಾಗ, ಪ್ರಾರಬ್ಧ ಜೀವಿಗೆ ಬಂದು ಕೊನೆಯ ಮನೋದೃಶ್ಯವನ್ನು ಹಿಡಿದು ನಿರ್ಣಯಿಸಲ್ಪಡುತ್ತದೆ. ಕೊನೆಯ ಕ್ಷಣದಲ್ಲಿ ಸಂಚಿತದಿಂದ ಪ್ರಾರಬ್ಧ

ನಿರ್ಣಯವಾದಾಗ ಆ ಸಮಯದಲ್ಲಿಯೇ ಅಲ್ಲಿಯವರೆಗೂ ಸಂಪಾದಿಸ್ಪಟ್ಟಿರುವ ಆಗಾಮಿಕ ಕರ್ಮ ಸಂಚಿತದಲ್ಲಿ ಬೆರೆತುಹೋಗುತ್ತದೆ. ಸಂಚಿತದಿಂದ ಪ್ರಾರಬ್ಧ ತಯಾರಾಗುವುದಕ್ಕೆ ಮತ್ತು ಸಂಚಿತದೊಳಗೆ ಆಗಾಮಿಕ ಕರ್ಮ ಬೆರೆತುಹೋಗುವುದು ಎರಡು ಒಂದೇ ಸಮಯದಲ್ಲಿ ನಡೆದು ಹೋಗುತ್ತದೆ.

ಮನುಷ್ಯ ತನ್ನ ಜೀವನದಲ್ಲಿ ಯಾವ ವಿಷಯದ ಮೇಲೆ ಹೆಚ್ಚಾಗಿ ಲಗ್ನವಾಗಿ ಬದುಕುತ್ತಿದ್ದಾನೆ, ಯಾವ ವಿಷಯದ ಮೇಲೆ ತನ್ನ ಇಚ್ಛೆ ಹೆಚ್ಚಾಗಿದೆಯೋ, ಯಾವ ವಿಷಯವನ್ನು ಯಾವಾಗಲು ಜ್ಞಾಪಕಮಾಡಿ ಕೊಳ್ಳುತ್ತಾನೋ, ಆ ವಿಷಯ ಜ್ಞಾಪಕವೇ ಅವಸಾನದಶೆಯಲ್ಲಿ ಕೊನೆಯದಾಗಿ ಮನಸ್ಸಿಗೆ ಬಂದು ಜೀವಿಗೆ ಸೇರುತ್ತದೆ. ಯಾವಾಗಲು ಸ್ಮರಿಸುವುದರಿಂದ ಶರೀರ ಬಿಟ್ಟಾಗ ಅದೇ ಜ್ಞಾಪಕ ಬಂದು ನಂತರ ಅದೇ ಸ್ಥಿತಿಯನ್ನು ಪಡೆಯುತ್ತಾನೆಂದು ಗೀತೆಯಲ್ಲಿ ಸಹ ಹೇಳಿದ್ದಾರೆ. **ಅಷ್ಟೇ ಅಲ್ಲದೆ ಯಾವಾಗಲು ನನ್ನನ್ನೇ ಸ್ಮರಿಸು ಕೊನೆಯದಾಗಿ ನಾನೇ ಜ್ಞಾಪಕ ಬಂದು ನನ್ನೊಳಗೆ ಐಕ್ಯವಾಗುತ್ತೀಯೆಂದು ದೇವರು ತಿಳಿಸುವುದು ಸಹ ನಡೆದಿದೆ.** ಈ ವಿಷಯಗಳನ್ನು ಗೀತೆಯಲ್ಲಿ ಅಕ್ಷರಪರಬ್ರಹ್ಮ ಯೋಗವೆಂಬ ಅಧ್ಯಾಯದಲ್ಲಿ **" ತಸ್ಮಾತ್ ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯಚ, ಮಯ್ಯರ್ಪಿತಮನೋಬುದ್ಧಿ ರ್ಮಾಮೇವೈಷ್ಯಸ್ಯಸಂಶಯಃ" "ಅಭ್ಯಾಸ ಯೋಗಯುಕ್ತೇನ ಚೇತಸಾ ನಾನ್ಯ ಗಾಮಿನಾ, ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್"** ಇದರ ಭಾವನೆ ನಿನ್ನ ಮನಸ್ಸು ಬುದ್ಧಿ ಎಲ್ಲಾ ನನಗೆ ಸಮರ್ಪಿಸಿ, ಸರ್ವಕಾಲದಲ್ಲಿ ನನ್ನನ್ನೇ ಸ್ಮರಿಸುತ್ತಿರು ತಪ್ಪದೆ ನನ್ನನ್ನೇ ಸೇರುತ್ತೀಯಾ. ಧ್ಯಾನ, ಅಭ್ಯಾಸದಿಂದ ಮನಸ್ಸಿನಲ್ಲಿ ನನ್ನನ್ನೇ ಸ್ಮರಿಸುವುದರಿಂದ ಪರಮ, ದಿವ್ಯವಾದ ನನ್ನನ್ನೇ ಸೇರುತ್ತೀಯಾ. ಎಂದು ಗೀತೆಯಲ್ಲಿ ಉಪಾಯವನ್ನು ಸಹ ತಿಳಿಸಿದ್ದಾನೆ.

ಜೀವಿಗೆ ನಂತರ ಜನ್ಮ ಯಾವುದಾದರು ಬರಬಹುದು ಆದರೆ, ಮರಣಿಸುವ ಸಮಯದಲ್ಲಿ ಶಾರೀರಕ, ಮಾನಸಿಕ ಬಾಧೆಗಳೆಲ್ಲವುಗಳಿಂದ ತಪ್ಪಿಸಿಕೊಂಡು ಯಾವ ದುಃಖ ಹೊಂದುವುದಿಲ್ಲವೆಂದು ಹೇಳಬಹುದು. ಇಲ್ಲಿಯವರೆಗೂ ಮರುಜನ್ಮಕ್ಕೆ ಹೋಗುವವನಿಗೆ ಅವಸಾನದಶೆಯಲ್ಲಿ ನಡೆಯುವ

ವಿಷಯವೆಲ್ಲವೂ ವಿವರವಾಗಿ ತಿಳಿದುಕೊಂಡಿದ್ದೇವೆ. ಇದು ಸರ್ವಸಾಧಾರಣವಾಗಿ ಎಲ್ಲರಿಗೂ ನಡೆಯುವ ಪದ್ಧತಿ ಅಂದುಕೊಳ್ಳೋಣ. ಜೀವನದಲ್ಲಿ ಕರ್ಮವನ್ನು ಅಂಟದೆ, ಸಂಚಿತವನ್ನು ಇಲ್ಲದಂತೆ ಮಾಡಿಕೊಂಡವನು ಮೋಕ್ಷ ಪಡೆಯುತ್ತಾನೆ. ಕರ್ಮಶೇಷವಿಲ್ಲದ ಮನುಷ್ಯನ ಮರಣದಲ್ಲಿ ಅವಸಾನದಶೆ ಹೇಗಿರುತ್ತದೋ ತಿಳಿದುಕೊಳ್ಳೋಣ.

ಜಗತ್ತಿನಲ್ಲಿ ಯೋಗಿಗಳಾದವರೆ ಪರಮಾತ್ಮನಲ್ಲಿ ಐಕ್ಯವಾಗುವುದಕ್ಕೆ ಅವಕಾಶ ಇದೆ. ಯೋಗಿಗಳಲ್ಲಿ ಮೂರು ವಿಧಗಳು ಇದ್ದಾರೆ. ಅವರು ಬ್ರಹ್ಮ ಯೋಗಿಗಳು, ಕರ್ಮಯೋಗಿಗಳು, ಭಕ್ತಿಯೋಗಿಗಳು. ಯೋಗಿಗಳಿಗೆ ಕೊನೆಯ ಗಮ್ಯಸ್ಥಾನ ಪರಮಪದ. ಎಲ್ಲಾಕಡೆ ವ್ಯಾಪಿಸಿದ ಪರಮಾತ್ಮನಲ್ಲಿ ಸೇರುವುದನ್ನು ಮೋಕ್ಷ ಹೊಂದುವುದು ಎನ್ನುತ್ತಿದ್ದೇವೆ. ಬ್ರಹ್ಮಯೋಗಿಗಳು ಶರೀರದಲ್ಲಿನ ಮನಸ್ಸನ್ನು ನಿಗ್ರಹಪಡಿಸಿಕೊಂಡು ಯೋಗವನ್ನು ಆಚರಿಸುತ್ತಾರೆ. ಕರ್ಮಯೋಗಿಗಳು ಅಹಮ್‌ನನ್ನು ಅಣಚಿ ಯೋಗವಾಚರಿಸುತ್ತಾರೆ. ಭಕ್ತಿಯೋಗಿಗಳು ಚಿತ್ತದ ವಿವರವು ತಿಳಿದು ಅದನ್ನು ತಮ್ಮ ಭಾವದಲ್ಲಿ ಇಲ್ಲದಂತೆ ಮಾಡಿಕೊಳ್ಳುತ್ತಾರೆ. ಈ ವಿಧಾನಗಳಿಂದ ಅವರು ಪರಮಾತ್ಮನನ್ನು ಸೇರುವುದಕ್ಕೆ ಮಾರ್ಗವನ್ನು ಏರ್ಪಡಿಸಿಕೊಳ್ಳುತ್ತಿದ್ದಾರೆ. ಕರ್ಮ ಸ್ವಲ್ಪವೂ ಸಹ ಇಲ್ಲದಂತೆ ಮುಗಿದುಹೋದ ಯೋಗಿಗಳಿಗೆ ಕೊನೆಯ ಮರಣ ಹೊಂದಿ ಪರಮಾತ್ಮನಲ್ಲಿ ಐಕ್ಯವಾಗುತ್ತಾರೆ. ಯೋಗಿಗಳಾದವರು ಮರಣಿಸಿದ ನಂತರ ಮತ್ತೆ ಹುಟ್ಟುವುದಿಲ್ಲ. ಅಂತಹವರ ಮರಣ ಜನ್ಮಗಳಿಗೆ ಹೋಗುವವರ ಸಾಧಾರಣ ಮನುಷ್ಯರ ಮರಣದಂತೆ ಇರುವುದಿಲ್ಲ. ಮೂರು ವಿಧಗಳ ಯೋಗಿಗಳು ಪರಮಾತ್ಮನನ್ನು ಸೇರುತ್ತಿದ್ದರೂ ಅವರ ಮರಣವು ಶರೀರದಲ್ಲಿ ಸ್ವಲ್ಪ ವ್ಯತ್ಯಾಸದಿಂದ ಬದಲಾವಣೆಗಳು ಉಂಟಾಗಿ ಪರಮಾತ್ಮನಲ್ಲಿ ಬೆರೆತು ಹೋಗುವುದು ನಡೆಯುತ್ತಿದೆ. ಮೊದಲು ಬ್ರಹ್ಮಯೋಗಿಗಳು ಜೀವನದಲ್ಲಿ ತಮ್ಮ ಮನಸ್ಸನ್ನು ಅಡಗಿಸುವುದರಿಂದ ಯಾವ ವಿಷಯಚಿಂತೆಗಳು ಮನಸ್ಸಿಗೆ ಬರದಂತೆ ಅಡಗಿಹೋಗುವುದು ಅಭ್ಯಾಸವಾಗಿರುತ್ತದೆ. ಮನೋಕಾರ್ಯಗಳನ್ನು ಅಡಗಿಸಿದ ಕಾಲವನ್ನು ಬ್ರಹ್ಮಯೋಗ ಕಾಲ ಎನ್ನುತ್ತೇವೆ.

ಜೀವನದಲ್ಲಿ ಎಷ್ಟೋ ಕಾಲ ಬ್ರಹ್ಮಯೋಗವನ್ನು ಅಭ್ಯಾಸ ಮಾಡುವುದರಿಂದ ಅವರ ಮರಣಕಾಲದಲ್ಲಿ ಅವಸಾನದಶೆಯಲ್ಲಿ ಹೊರಗಿನ ಅವಯವಗಳೆಲ್ಲವೂ ನಿಂತುಹೋಗಿ ಮನಸ್ಸು ಆತ್ಮನಲ್ಲಿ ಲಗ್ನವಾಗಿ ಬುದ್ಧಿಗೆ ಆತ್ಮ ವಿಷಯವನ್ನು ತಿಳಿಸುವುದರಿಂದ ಬುದ್ಧಿ ಆತ್ಮ ವಿಷಯವನ್ನೇ ಜೀವಾತ್ಮಕ್ಕೆ ತಿಳಿಸುತ್ತದೆ. ಆಗ ಜೀವಿಯು ಆತ್ಮವನ್ನೇ ತಿಳಿಯುತ್ತಿರುತ್ತಾನೆ. ಮನಸ್ಸು ಬುದ್ಧಿಗೆ, ಬುದ್ಧಿ ಜೀವಾತ್ಮಕ್ಕೆ ಆತ್ಮವನ್ನು ತಿಳಿಸುತ್ತಾ ಮೊದಲು ಮನಸ್ಸು ಬುದ್ಧಿಯಲ್ಲಿ ಸೇರಿಹೋಗುತ್ತದೆ. ಮನಸ್ಸು ಬುದ್ಧಿಯಲ್ಲಿ ಲೀನವಾಗಿ ಬೇರೆಯಾಗಿ ಇಲ್ಲದಂತೆಹೋಗುವುದು ಯಾವಾಗಲು ನಡೆಯದ ಅಪರೂಪವಾದ ಸಂಘಟನೆ. ಬದುಕಿರುವ ಬ್ರಹ್ಮಯೋಗಿಗಳಲ್ಲಿ ಯೋಗಸಮಯದಲ್ಲಿ ಮನಸ್ಸು ಆತ್ಮ ವಿಷಯವನ್ನು ಬುದ್ಧಿಗೆ ತಿಳಿಸಿದರೂ ಅವು ಬೇರೆ ಬೇರೆಯಾಗಿರುತ್ತವೆ. ಆದರೆ ಕೊನೆಯ ಮರಣದಲ್ಲಿ ಮಾತ್ರ ಮನಸ್ಸು ಬುದ್ಧಿಯಲ್ಲಿ ಸೇರಿ ಅಂತ್ಯವಾಗಿಹೋಗುತ್ತದೆ. ಮನಸ್ಸಿನೊಂದಿಗೆ ಸೇರಿ ಪ್ರತ್ಯೇಕವಾಗಿ ಏರ್ಪಟ್ಟ ಬುದ್ಧಿ ಕೊನೆಯದಾಗಿ ಜೀವಾತ್ಮನಲ್ಲಿ ಬೆರೆತು ಇಲ್ಲದಂತೆ ಹೋಗುತ್ತಾನೆ. ಆಗ ಮನಸ್ಸು ಬುದ್ಧಿ ಜೀವಿಯು ಏಕವಾಗಿ ಬದಲಾಗಿರುತ್ತಾರೆ. ಈ ವಿಧಾನ ಮೋಕ್ಷ ಪಡೆಯುವ ಮರಣದಲ್ಲಿ ಬ್ರಹ್ಮಯೋಗಿಗಳಿಗೆ ಮಾತ್ರ ನಡೆಯುತ್ತದೆಂದು ಜ್ಞಾಪಕ ಮಾಡುತ್ತಿದ್ದೇವೆ. ಮನೋಬುದ್ಧಿಗಳಿಂದ ಬೆರೆತ ಜೀವಿಯು ಪ್ರತ್ಯೇಕವಾಗಿ ತಯಾರಾಗಿ ಕೊನೆಗೆ ಆತ್ಮನಲ್ಲಿ ಬೆರೆತು ತಾನು ಸಹ ಇಲ್ಲದಂತೆ ನಾಶವಾಗಿ ಹೋಗುತ್ತಾನೆ. ಜೀವಿಗೆ ನಾಶ ಅಲ್ಲಿಯವರೆಗೂ ಇಲ್ಲದೇ ಕೊನೆಯಲ್ಲಿ ನಾಶವಾಗುತ್ತಿದ್ದಾನೆ ಆದ್ದರಿಂದ ಜೀವಿಯನ್ನು ಕ್ಷರನೆಂದು ಹೇಳಿದ್ದಾರೆ. ಭಗದ್ಗೀತೆಯಲ್ಲಿ ಭಗವಂತನಿಂದ ಕ್ಷರನೆಂದು ಹೇಳಲಾದ ಜೀವಾತ್ಮ ಮೋಕ್ಷ ಹೊಂದುವ ಮರಣದಲ್ಲಿ ಕ್ಷರನಾಗಿ ತನ್ನ ಇರುವಿಕೆಯನ್ನು ಕಳೆದುಕೊಂಡು ಸ್ವಲ್ಪವೂ ಇಲ್ಲದಂತೆ ಹೋಗುತ್ತಿದೆ. ಎಷ್ಟೋ ಯುಗಗಳಿಂದ ಸಾವು ಹುಟ್ಟುಗಳನ್ನು ಕೊನೆಸಾಗಿಸುತ್ತಿರುವ ಜೀವಾತ್ಮ ಕೊನೆಯ ಮರಣದಿಂದ ತಾನು ಇಲ್ಲದಂತೆ ಹೋಗುವುದರಿಂದ ನಂತರ ಹುಟ್ಟುವ ಅವಕಾಶವೆ ಇಲ್ಲ. ಈ ವಿಧವಾಗಿ ಜೀವಾತ್ಮನಿಗೆ ತೆರೆಬಿದ್ದುಹೋಗುತ್ತಿದೆ. ಜೀವಾತ್ಮ ಆತ್ಮನಲ್ಲಿ ಬೆರೆತು ನಾಶವಾಗಿಹೋಗುವಾಗ ಅಲ್ಲಿಯವರೆಗಿರುವ ಆತ್ಮ,

ಆತ್ಮವಾಗಿಲ್ಲದೇ ಪ್ರತ್ಯೇಕವಾಗಿ  ಬದಲಾಗಿ ಶರೀರದಲ್ಲಿಯೇ ಇರುವ ಪರಮಾತ್ಮನೊಳಗೆ ಬೆರೆತುಹೋಗುತ್ತಿದೆ. ಆತ್ಮ ಪರಮಾತ್ಮ ಅನುಸಂಧಾನವಾಗಿ ಶರೀರದಲ್ಲಿ ಏನು ಇಲ್ಲದಂತೆ ಪರಮಾತ್ಮ ಮಾತ್ರ ಉಳಿದುಹೋಗುತ್ತಿದೆ. ಯಾವಾಗ ಜೀವಾತ್ಮ ಆತ್ಮನಲ್ಲಿ ಸೇರುತ್ತಿದೆಯೋ ಆಗಲೇ ಹೊರಗಿನ ಶ್ವಾಸವೂ ಸಹ ನಿಂತುಹೋಗುತ್ತಿದೆ. ಈ ವಿಧವಾಗಿ ಬ್ರಹ್ಮಯೋಗಿಗಳ ಕೊನೆಯ ಮರಣ ಇರುವಾಗ ಕರ್ಮಯೋಗಿಗಳ ಮರಣ ಹೇಗಿದೆಯೋ ಕೆಳಗೆ ನೋಡೋಣ.

ಜೀವನದಲ್ಲಿ ಕರ್ಮಯೋಗವನ್ನು ಸಾಧಿಸಿದ ಯೋಗಿಗಳು ತಮ್ಮ ಅಹಮ್‌ನನ್ನು ಅಣಚಿಹಾಕಿರುತ್ತಾರೆ. ಅಹಮ್‌ನ ಕೆಲಸವನ್ನು ತಿಳಿದವರಾಗಿ ಅದು ಹೇಳಿದಂತೆ ಕೇಳದವರೆ ಕರ್ಮಯೋಗಿಗಳು. ಕರ್ಮಯೋಗಿಗಳ ಕೊನೆಯ ಮರಣದಲ್ಲಿ ಅವಸಾನದಶೆಯಲ್ಲಿ ಬಾಹ್ಯ ಅವಯುವಗಳಿಂದ ಆತ್ಮಶಕ್ತಿ ಇಲ್ಲದಂತೆಹೋಗುವುದರಿಂದ ಶರೀರವು ಹಿಡಿತ ತಪ್ಪಿಹೋಗಿರುತ್ತದೆ. ಆ ಸಮಯದಲ್ಲಿ ಮನಸ್ಸು ದೈವಚಿಂತನೆ ಹೊಂದಿ ದೈವಜ್ಞಾಪಕವನ್ನು ಬುದ್ಧಿಗೆ ತಿಳಿಸಿದಾಗ, ಬುದ್ಧಿ ಆ ವಿಷಯವನ್ನು ಜೀವಿಗೆ ತಿಳಿಸುತ್ತಿದೆ. ಬುದ್ಧಿ ಮೂಲಕ ಬಂದಿರುವುದನ್ನು ಜೀವಾತ್ಮ ಅನುಭವದಲ್ಲಿ ಇಟ್ಟುಕೊಂಡು ಮನಸ್ಸು ಬುದ್ಧಿಯಲ್ಲಿ ಸೇರಿ ಇಲ್ಲದಂತೆ ಹೋಗುತ್ತಿದೆ. ಮನಸ್ಸಿನ ಜೊತೆ ಸೇರಿದ ಬುದ್ಧಿ ಬ್ರಹ್ಮ ಯೋಗಿಗಳಂತೆ ಜೀವಿಯೊಂದಿಗೆ ಬೆರೆಯದೆ ಅಹಮ್‌ಯೊಂದಿಗೆ ಬೆರೆಯುತ್ತಿದೆ. ಮನೋಬುದ್ಧಿ, ಅಹಮ್‌ಜೊತೆ ಸೇರಿ ರೂಪಬದಲಾದ ಅಹಮ್ ಜೀವಿಜೊತೆ ಕೂಡುತ್ತಿದೆ. ಮನೋ, ಬುದ್ಧಿ, ಅಹಮ್‌ಗಳನ್ನು ತನ್ನಲ್ಲಿ ಲೀನಮಾಡಿಕೊಂಡ ಜೀವಾತ್ಮ ಪ್ರತ್ಯೇಕವಾಗಿ ಬದಲಾಗಿ ಆತ್ಮನಲ್ಲಿ ಸೇರುತ್ತಿದೆ. ಜೀವಿಯನ್ನು ತನ್ನಲ್ಲಿ ಸೇರಿಸಿಕೊಂಡ ಆತ್ಮ ಕೊನೆಗೆ ಪರಮಾತ್ಮನಲ್ಲಿ ಲೀನ ವಾಗಿಹೋಗುತ್ತಿದೆ. ಅದುವೇ ಕರ್ಮಯೋಗಿಗಳ ಮೋಕ್ಷ. ಬದಲಾವಣೆ ಹೊಂದಿದ ಜೀವಿಯು ಕೊನೆಗೆ ಆತ್ಮದ ಮೂಲಕ ಪರಮಾತ್ಮನಲ್ಲಿ ಸೇರಿ ವಿಶ್ವವೆಲ್ಲವೂ ಅಣುಅಣುವಿನಲ್ಲಿ ವ್ಯಾಪಿಸಿಹೋಗುತ್ತಿದ್ದಾನೆ. ಇಲ್ಲಿ ಗಮನಿಸಬೇಕಾದ ವಿಷಯ ಏನೆಂದರೆ! ಬ್ರಹ್ಮಯೋಗಿಗಳಲ್ಲಿ ಮನಸ್ಸು ಬುದ್ಧಿಯಲ್ಲಿ, ಬುದ್ಧಿ ಜೀವಿಯಲ್ಲಿ, ಜೀವಿಯು

ಆತ್ಮನಲ್ಲಿ, ಆತ್ಮ ಪರಮತ್ಮನಲ್ಲಿ ಕೂಡಿದಾಗ, ಅಹಮ್ ಮತ್ತು ಚಿತ್ತದ ಪ್ರಸ್ತಾವನೆ ಬರಲಿಲ್ಲ. ಕರ್ಮಯೋಗಿಗಳಲ್ಲಿ ಮಾತ್ರ ಸ್ವಲ್ಪ ಬದಲಾವಣೆಯಿಂದ ಅಹಮ್‌ನಲ್ಲಿ ಬುದ್ಧಿ ಸೇರಿದಾಗ, ಅಹಮ್ ಜೀವಿಯಲ್ಲಿ ಸೇರುತ್ತಿದೆ. ಇಲ್ಲಿ ಚಿತ್ತದ ಪ್ರಸ್ತಾವನೆ ಬರಲಿಲ್ಲ. ಈ ವಿಷಯಕ್ಕೆ ನಂತರ ಉತ್ತರಕೊಡುತ್ತೇವೆ. ಈಗ ಭೂಮಿ ಮೇಲೆ ಅಪರೂಪವಾಗಿರುವ ಭಕ್ತಿಯೋಗಿಗಳು ಮೋಕ್ಷ ಹೊಂದುವುದು ಹೇಗಿದೆಯೋ ವಿಶದವಾಗಿ ನೋಡೋಣ.

ಮೋಕ್ಷ ಹೊಂದುವ ಕೊನೆಯ ಮರಣದಲ್ಲಿ ಭಕ್ತಿಯೋಗವನ್ನು ಅನುಸರಿಸಿದವರಲ್ಲಿ ಮೊದಲು ಶರೀರವು ಸ್ಥಂಭಿಸಿಹೋಗಿ, ಆ ನಂತರ ಮನಸ್ಸು ಪರಮಾತ್ಮ ಧ್ಯಾಸದ ಮೇಲೆ ನಿಂತು ಆ ವಿಷಯವನ್ನು ಬುದ್ಧಿಗೆ ತಿಳಿಸುತ್ತದೆ. ಬುದ್ಧಿ ಜೀವಿಗೆ ತಿಳಿಸಿದಾಗ ಆ ಅನುಭವದಲ್ಲಿ ಜೀವಿಯು ನಿಂತಿರುತ್ತಾನೆ. ಅಂತಹ ಸಮಯದಲ್ಲಿ ಮನಸ್ಸು ಬುದ್ಧಿಯಲ್ಲಿ ಸೇರಿ ಅಂತ್ಯವಾಗಿ ಹೋಗುತ್ತಾನೆ. ನಂತರ ಬುದ್ಧಿ ಅಹಮ್‌ನಲ್ಲಿ ಸೇರಿ ಇಲ್ಲದಂತೆಹೋಗುತ್ತಾನೆ. ಆಗ ಪ್ರತ್ಯೇಕವಾಗಿ ಬದಲಾದ ಅಹಮ್ ಚಿತ್ತದಲ್ಲಿ ಸೇರಿ ಇಲ್ಲದಂತೆಹೋಗುತ್ತಾನೆ. ಪ್ರತ್ಯೇಕವಾದ ಅಹಮ್‌ನಲ್ಲಿ ಬೆರೆತ ಚಿತ್ತವು ತಾನು ಸಹ ಬೇರೆ ವಿಧವಾಗಿ ಬದಲಾಗಿ ಜೀವಿಯಲ್ಲಿ ಸೇರುತ್ತಿದೆ. ಬ್ರಹ್ಮಯೋಗಿಗಳಲ್ಲಿನ ಕೊನೆಯ ಜೀವಾತ್ಮಗಿಂತ ಮತ್ತು ಕರ್ಮ ಯೋಗಿಗಳಲ್ಲಿ ಕೊನೆಯ ಜೀವಾತ್ಮಗಿಂತ ಚಿತ್ತವನ್ನು ಸಹ ಸೇರಿಸಿಕೊಂಡು ಇನ್ನೂ ಪ್ರತ್ಯೇಕವಾಗಿ ಬದಲಾದ ಜೀವಾತ್ಮ ಆತ್ಮನಲ್ಲಿ ಸೇರಿ ನಾಶವಾಗಿ ಹೋಗುತ್ತಿದ್ದಾನೆ. ಭಕ್ತಿಯೋಗಿಗಳಲ್ಲಿ ಹಾಗೆ ಜೀವಾತ್ಮ ನಶಿಸಿದ ನಂತರ ಆತ್ಮ ಪರಮಾತ್ಮನಲ್ಲಿ ಶರೀರದಲ್ಲಿಯೇ ಬೆರೆತು ಹೋಗುತ್ತಿದೆ. ಈ ವಿಧವಾಗಿ ಭಕ್ತಿಯೋಗಿಗಳು ಕೊನೆಗೆ ಮೋಕ್ಷಹೊಂದಿ ವಿಶ್ವವ್ಯಾಪಿಯಾಗಿ ಪ್ರತಿ ಅಣುವಿನಲ್ಲಿಯೂ ವ್ಯಾಪಿಸಿ ಹೋಗುತ್ತಿದ್ದಾರೆ.

ಬ್ರಹ್ಮಯೋಗಿಗಳಲ್ಲಿ ಕೊನೆಯ ಮರಣದಲ್ಲಿ ಅಹಮ್, ಚಿತ್ತವು ಏನಾಗಿದೆ ಎಂದು, ಹಾಗೆ ಕರ್ಮಯೋಗಿಗಳಲ್ಲಿ ಕೊನೆಯ ಮರಣದಲ್ಲಿ ಚಿತ್ತವು ಏನಾಗಿದೆ ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ಕರ್ಮ ಯೋಗಿಗಳಿಗೆ

ಅಹಮ್ ಮೇಲೆ, ಭಕ್ತಿಯೋಗಿಗಳಿಗೆ ಚಿತ್ತದ ಮೇಲೆ ಧ್ಯಾಸ ಇರುವುದರಿಂದ ಶರೀರದಲ್ಲಿಯೇ ಅವು ಉಳಿಯುತ್ತಿವೆ. ಅವುಗಳ ಧ್ಯಾಸವಿಲ್ಲದ ಬ್ರಹ್ಮಯೋಗಿಗಳಲ್ಲಿ ಬುದ್ಧಿ ಜೀವಿಯ ಜೊತೆ ಬೆರೆತಾಗ ಅಹಮ್, ಚಿತ್ತ ಎರಡು ಇಲ್ಲದಂತೆ ಹೋಗುತ್ತಿವೆ. ಹಾಗೆಯೇ ಕರ್ಮಯೋಗಿಗಳಲ್ಲಿ ಅಹಮ್ ಜೀವಿಯಲ್ಲಿ ಬೆರೆತುಹೋದಾಗ ಚಿತ್ತವೂ ಸಹ ನಶಿಸಿಹೋಗಿದೆ. ಭಕ್ತಿಯೋಗಿಗಳಲ್ಲಿ ಹಾಗೆ ಅಲ್ಲದೆ ಅಹಮ್, ಚಿತ್ತ ಎರಡು ಬದಲಾವಣೆಹೊಂದಿ ನಶಿಸಿವೆ. ಕರ್ಮ ಯೋಗಿಗಳಲ್ಲಿ ಮಾತ್ರ ಚಿತ್ತವು ಸಾಧಾರಣವಾಗಿ ನಶಿಸದೆ, ಅಹಮ್ ಜೀವಾತ್ಮನಲ್ಲಿ ಬದಲಾವಣೆಹೊಂದಿ ನಶಿಸಿದೆ. ಯೋಗಿಗಳಲ್ಲದೆ ಸಾಧಾರಣ ಜೀವಿಗಳು ಮರಣಿದಾಗ ಮನಸ್ಸು, ಬುದ್ಧಿ ನಶಿಸಿದಾಗಲೇ ಚಿತ್ತವು, ಅಹಮ್ ಎರಡು ನಶಿಸಿವೆಂದೇ ತಿಳಿಯಿರಿ. ಮರುಜನ್ಮಕ್ಕೆ ಹೋಗುವವರ ಮರಣಗಳಲ್ಲಿ ಮನಸ್ಸು, ಬುದ್ಧಿ, ಚಿತ್ತ, ಅಹಮ್ ಯಾವವಿಧ ಬದಲಾವಣೆಗಳು ಹೊಂದದೆ ಹೇಗಿರುವವು ಹಾಗೆ ಶಕ್ತಿ ಕಳೆದುಕೊಂಡು ನಶಿಸುತ್ತವೆ. ಇಲ್ಲಿಯವರೆಗೂ ಯೋಗಿಗಳ ಶರೀರದಲ್ಲಿ ಜನ್ಮವಿಲ್ಲದ ಕೊನೆಯ ಮರಣ ಹೇಗೆ ನಡೆಯುತ್ತಿದೆಯೋ ತಿಳಿದುಕೊಂಡಿದ್ದೇವೆ. ಇಲ್ಲಿ ಸ್ವಲ್ಪ ವಿವರ ತಿಳಿಯ ಬೇಕಾಗಿರುವುದೇನೆಂದರೆ! ಯೋಗಿಗಳಾದವರೆಲ್ಲರಿಗೂ ಹೀಗೆ ಮರಣವು ನಡೆಯುತ್ತದಾ ಎಂದು ಪ್ರಶ್ನೆ ಬರಬಹುದು. ಅದಕ್ಕೆ ಉತ್ತರವಾಗಿ ಯೋಗಿಗಳಾದಷ್ಟು ಮಾತ್ರಕ್ಕೆ ಇಂತಹ ಮರಣ ನಡೆಯುವುದಕ್ಕೆ ಅವಕಾಶವೇ ಇಲ್ಲ. ಕರ್ಮಶೇಷ ಇಲ್ಲದಂತೆ ಮುಗಿದುಹೋದ ಯೋಗಿಗಳಿಗೆ ಮಾತ್ರವೆ ಜನ್ಮಗಳಿಲ್ಲದ ಕೊನೆಯ ಮರಣ ಸಂಭವಿಸುತ್ತದೆ. ಆಗ ಯೋಗಿಗಳು ಮೋಕ್ಷ ಹೊಂದುತ್ತಾರೆ. ಯೋಗಿಗಳಾದಷ್ಟು ಮಾತ್ರಕ್ಕೆ ಕರ್ಮ ಇದ್ದರೆ ದೇವರಲ್ಲಿ ಐಕ್ಯ ಆಗಲಾರರು. ಸಾಧಾರಣ ಮರಣಗಳು ಸಂಭವಿಸುತ್ತವೆ. ಕರ್ಮಶೇಷ ಇಲ್ಲದವರು ಕೊನೆಯ ಮರಣವನ್ನು ಹೊಂದಿದಾಗ ಹೊರಗಿನ ಪ್ರಜೆಗಳು ಗ್ರಹಿಸುವುದಕ್ಕೆ ಅವಕಾಶವಿದೆ. ಅದೇನೆಂದರೆ ಸಂಪೂರ್ಣ ಯೋಗಿಗಳಾದವರು, ಕರ್ಮವಿಲ್ಲದಂತೆ ಮಾಡಿಕೊಂಡವರು, ಮರಣಿಸುವ ಸಮಯ ದಿನದಲ್ಲಿ ಹಗಲಾಗಿರುತ್ತದೆ. ತಿಂಗಳಲ್ಲಿ ಶುಕ್ಲಪಕ್ಷವಾಗಿರುತ್ತದೆ. ವರ್ಷದಲ್ಲಿ ಉತ್ತರಾಯಣವಾಗಿರುತ್ತದೆ. ಹಗಲು, ಶುಕ್ಲಪಕ್ಷ, ಉತ್ತರಾಯಣ ಆದರೂ ಮರಣಿಸುವ ಯೋಗಿಗಳ ಶರೀರವಿರುವ ಪ್ರಾಂತದ

ಮೇಲೆ ಸೂರ್ಯರಶ್ಮಿ ಇಲ್ಲದಂತೆಹೋದರೆ ಅವರದು ಕೊನೆಯ ಮರಣ ಅಲ್ಲವೆಂದು, ಕರ್ಮ ಶೇಷವಿದೆಯೆಂದು, ಅವರಿಗೆ ಮತ್ತೆ ಜನ್ಮ ಇದೆಯೆಂದು ಹೇಳಬಹುದು. ಯೋಗಿಗಳು ಅಲ್ಲದವರು ಹಗಲು, ಶುಕ್ಲಪಕ್ಷ, ಉತ್ತರಾಯಣ, ಸೂರ್ಯರಶ್ಮಿ ಎಲ್ಲ ಕಲೆತಾಗ ಮರಣಿಸಿದರು ಪ್ರಯೋಜನೆ ಇಲ್ಲವೆಂದು ಅವರಿಗೆ ಈ ನಿಬಂಧನೆ ಜಾರಿಯಾಗುವುದಿಲ್ಲವೆಂದು ತಿಳಿಯಬೇಕು. ಯೋಗಿಗಳಾದವರಿಗೆ ಮಾತ್ರವೆ ಈ ಮರಣ ಸಮಯ ನಿಬಂಧನ ಅನ್ವಯಿಸುತ್ತದೆಂದು ತಿಳಿಯುವಂತೆ ಭಗವದ್ಗೀತೆ ಅಕ್ಷರಪರಬ್ರಹ್ಮ ಯೋಗದಲ್ಲಿ 23ನೇ ಶ್ಲೋಕ **"ಯತ್ರ ಕಾಲೇತ್ವನಾವೃತ್ತಿ ಮಾವೃತ್ತಿಂ ಚೈವ ಯೋಗಿನಃ। ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ" "ಯಾವ ಕಾಲದಲ್ಲಿ ಮರಣಿಸಿದರೆ ಯೋಗಿಗಳು ಮೋಕ್ಷ ಹೊಂದುತ್ತಾರೋ, ಯಾವ ಕಾಲದಲ್ಲಿ ಮರಣಿಸಿದರೆ ಮತ್ತೆ ಹುಟ್ಟುತ್ತಾರೋ ಆ ಕಾಲಗಳನ್ನು ಕುರಿತು ಹೇಳುತ್ತಿದ್ದೇನೆ"** ಎಂದು ಹೇಳಿದ್ದಾನೆ. ಈ ಶ್ಲೋಕದಲ್ಲಿ ಪ್ರತ್ಯೇಕವಾಗಿ "ಯೋಗಿನಃ" ಎನ್ನುವ ಪದವನ್ನು ಗುರುತಿಸಿಕೊಳ್ಳಬೇಕು. ನಂತರ ಬಿಸಿಲಿರುವ ಹಗಲು, ಶುಕ್ಲ ಪಕ್ಷ, ಉತ್ತರಾಯಣದಲ್ಲಿ ಸತ್ತುಹೋದ ಯೋಗಿಗಳು ಮೋಕ್ಷ ಪಡೆಯುತ್ತಾರೆಂದು, ಮೇಘಗಳು ಮುಚ್ಚಿಕೊಂಡ ಹಗಲು, ರಾತ್ರಿ, ಕೃಷ್ಣ ಪಕ್ಷ, ದಕ್ಷಿಣಾಯಣದಲ್ಲಿ ಮರಣಿಸಿದರೂ ಯೋಗಿಗಳು ಮತ್ತೆ ಜ್ಞಾನಪ್ರಕಾಶ ಹೊಂದಿ ಹುಟ್ಟುತ್ತಾರೆಂದು ಭಗವಂತನು ಹೇಳಿದ್ದಾನೆ. ಇದರಿಂದ ಸಾಧಾರಣ ಮನುಷ್ಯರ ಮರಣಗಳಿಗು ದೇವರು ಹೇಳಿದ ಕಾಲನಿರ್ಣಯವು ಅನ್ವಯಿಸುವುದಿಲ್ಲ ವೆಂದು ತಿಳಿಯಬೇಕು. ಇಲ್ಲಿಯವರೆಗೂ ಮರಣದ ಬಗ್ಗೆ ತಿಳಿದು ಕೊಂಡಿದ್ದೇವೆ. ಅದು ಸಾಧಾರಣ ಮನುಷ್ಯರಲ್ಲಿ ಯಾವ ವಿಧವಾಗಿದೆ ಮತ್ತು ಬ್ರಹ್ಮ, ಕರ್ಮ, ಭಕ್ತಿಯೋಗಿಗಳಲ್ಲಿಯೂ ಸಹ ಹೇಗಿರುವುದು ವಿವರಿಸಿಕೊಂಡಿದ್ದೇವೆ. ಮರಣವನ್ನು ಕುರಿತಾದ ಈ ವಿವರವು ಭೂತಕಾಲದಲ್ಲಿ ಇಲ್ಲವೆಂದು, ಭವಿಷ್ಯತ್ತಿನಲ್ಲಿ ಇದನ್ನು ಮಿಗಿಲಾದ ವಿವರವು ಯಾರು ಹೇಳಲಾರರೆಂದು ಸಗರ್ವವಾಗಿ ಹೇಳುತ್ತಿದ್ದೇವೆ. ಗರ್ವ ಎನ್ನುತ್ತಲೇ ತಪ್ಪಾಗಿ ಅರ್ಥೈಸಿಕೊಳ್ಳಬೇಡಿ. ಗರ್ವವನ್ನು ನಾನು ಉಪಯೋಗಿಸಿಕೊಂಡಿದ್ದೇನೆ ಹೊರತು ಗರ್ವವು ನನ್ನನ್ನು ಉಪಯೋಗಿಸಿ ಕೊಂಡಿಲ್ಲ.

ಮರಣ ಎಂದರೆ ಎಷ್ಟೋ ಭಯ, ತಿಳಿಯದೆ ಇರುವವರಿಗೆ ಈ ವಿವರಗಳು ಚೆನ್ನಾಗಿ ಉಪಯೋಗಪಡುತ್ತವೆಂದು ತಿಳಿಯುತ್ತಿದ್ದೇವೆ. ಪುರಾಣಗಳ ಮೇಲೆ, ಗತಕಾಲದಲ್ಲಿ ಜಡೆಗಳು ಬೆಳೆಸಿಕೊಂಡವರ ಮೇಲೆ ವಿಶ್ವಾಸ ಇರುವವರು, ಅವರು ಹೇಳಿದಂತೆ ಮರಣಕಾಲದಲ್ಲಿ ಯಮಕಿಂಕರರನ್ನು ಕುರಿತು ಬರೆಯಲಿಲ್ಲವೆ ಎಂದು ಅದೇ ನಿಜ, ಇದು ನಿಜ ಅಲ್ಲವೆಂದು ಅಂದುಕೊಂಡರೆ ಶಾಸ್ತ್ರಬದ್ಧತೆ ಇಲ್ಲದ ವಿಷಯಗಳನ್ನು ಏಕೆ ನಂಬುತ್ತಿದ್ದೀರೆಂದು ನಮ್ಮ ಕಡೆಯಿಂದ ಪ್ರಶ್ನೆಬರುತ್ತದೆ. ಭಗವದ್ಗೀತೆಯಲ್ಲಿ ಎಷ್ಟೋ ಪ್ರಮಾಣಗಳಿಂದ ಸ್ವತಃ ಭಗವಂತನು ಹೇಳಿದ ವಿಷಯವನ್ನೇ ವಿಪುಲವಾಗಿ ವಿವರಿಸಿದ್ದೇವೆ.

ಈ ಗ್ರಂಥದಲ್ಲಿ ಹೇಳಲಾದ **"ಜನನ ಮರಣ ರಹಸ್ಯಗಳು"** ಗತ ಕಾಲದಲ್ಲಿ ಯಾರು ಹೇಳಿಲ್ಲ. ಬರುವ ಕಾಲದಲ್ಲಿ ಇದನ್ನು ಮೀರಿ ಯಾರು ಹೇಳುವುದು ಇಲ್ಲ.

**ಈಗಲಾದರು ಎಲ್ಲರೂ ಜನನ ಮರಣಗಳ ಸತ್ಯ**
**ತಿಳಿದುಕೊಳ್ಳುತ್ತಾರೆಂದು ನಂಬುತ್ತಾ ಮುಗಿಸುತ್ತಿದ್ದೇವೆ.**



**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅವಶ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವುದಕ್ಕೂ ಶಾಸ್ತ್ರ ಅಷ್ಟೇ ಅವಶ್ಯವಾಗುತ್ತದೆ.**



**ಅಸತ್ಯವನ್ನು ಸಾವಿರ ಮಂದಿ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಮಂದಿ ಅಲ್ಲ ಎಂದರೂ ಅದು ಅಸತ್ಯವಲ್ಲ.**



# ಜನನ ಮರಣ ಸಿದ್ಧಾಂತ






*Author :*

**The Only GURU of Three Religions**

**The Spiritual Emperor, Thraitha Theorem Originator**

**Sri Acharya Prabodhananda Yogeeshwarulu**


*****

**www.thraithashakam.org**